# PACKAGE TOURS 2018

**Hotel Room Accom. & South Indian Veg. Food**

## Mini Andhra : 05 Days
**Jan 04**

Mantralaya, Srishaila, Mahanandi, Ahobilam (Nava Narasimha)

## South India : 10 Days
**Feb 17**

Guruvayur, Kaladi, Trivandram, Suchindram, Kovalam Beach, Kanyakumari, Rameshwaram, Madurai, Trichy, Srirangam, Tanjore, Kumbakonam, Chidambaram, Thiruvannamalai, Navagraha Temples

## Kashi Gaya Chitrakoot : 11/14 Days
**Feb 15 Mar 23**

Allahabad, Gaya, Bodhgaya, Kashi, Saranath, Ayodhya, Naimisharanya, Chitrakoot

## North East India : 14/20 Days*
**Apr 18**

Guwahati, Kamakhya, Kaziranga, Shillong, Cherrapunjee, Dawki, Bomdilla, Sela Pass, Tawang, Bhalukpong

## Kolkata Darjeeling : 13/16 Days
**Apr 03**

Bhubaneshwar, Puri, Konark, Chilka Lake, Kolkata, Siliguri, Gangtok, Chengu Lake, Harbhajan Singh Mandir, Darjeeling, Tiger Hills

## Shaktipeetha Manali Special : 14/18 Days
**Apr 18**

Attari Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## Kashi - Nepal : 12/16 Days
**Mar 21**

Kashi, Gorakhpur, Kathmandu, Pokhara, Mukthinath(optional), Manokamana, Patan



**May to Sep**

KAILASH & MANASA SAROVAR YATRA



**May 04, 21 June 06**

CHORODHAM YATRA



# Shri Hansaa Travels

**Recognised by Department of Tourism, Govt. of Karnataka**


: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612



# ವಿವೇಕಪ್ರಭ

ಫೆಬ್ರವರಿ-2018

ಸಂಪುಟ 19 ಸಂಚಿಕೆ 02

ಪ್ರಾರ್ಥನೆ : ರಾಮಕೃಷ್ಣ ರಕ್ಷಿಸೈ 4

ಸಂಪಾದಕೀಯ : ಆಧುನಿಕ ಪ್ರವೃತ್ತಿ ಮತ್ತು ಸನಾತನ ತತ್ತ್ವ 7

ವಚನವೇದದಿಂದ : ಮನಸ್ಸು ಮತ್ತು ಸಾಧನೆ 10

ಸಂತರ ಜೀವನ : ಶ್ರೀ ಮಧ್ವಾಚಾರ್ಯರು 32

ಚಿತ್ರಕಥೆ : ಪಂಡರಾಪುರದ ಇತಿಹಾಸ 37

ಸುದ್ದಿ ಸಂಚಯ : ‘ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ ವಾರ್ಷಿಕ ವರದಿಯ ಸಾರಾಂಶ : ೨೦೧೬-೨೦೧೭ 41

## ವಿಶೇಷ ಲೇಖನ

ಶಾಸ್ತ್ರದೃಷ್ಟಿಯಲ್ಲಿ ಸ್ವಾಮಿ ವಿವೇಕಾನಂದರನ್ನು ಕುರಿತ ಶ್ರೀರಾಮಕೃಷ್ಣರ ನುಡಿಗಳ ತಾತ್ಪರ್ಯ — *ಸ್ವಾಮಿ ವಿಶ್ವರೂಪಾನಂದ* 11

ಆಧ್ಯಾತ್ಮಿಕ ಪಥದಲ್ಲಿ ವಿಜ್ಞಾನಿ – ೩ — *ಪ್ರವ್ರಾಜಿಕಾ ಪರಮಪ್ರಾಣಾ* 17

ತನ್ಮೇ ಮನಃ ಶಿವಸಂಕಲ್ಪಮಸ್ತು — *ವೆಂ. ಲಕ್ಷ್ಮೀಶ* 22

## ಧಾರಾವಾಹಿ

ಶ್ರೀಮಾತೆ – ಭಾಗ ೧೩ — *ಆಶುತೋಷ್ ಮಿತ್ರ* 25

ಕಳೆದ ದಿನಗಳ ನೆನಪುಗಳು – ೧೪ — *ಸ್ವಾಮಿ ಶ್ರದ್ಧಾನಂದ* 28











ವ್ಯವಸ್ಥಾಪಕ ಸಂಪಾದಕರು: ಸ್ವಾಮಿ ಆತ್ಮಜ್ಞಾನಂದ ಸಂಪಾದಕರು: ಸ್ವಾಮಿ ಜ್ಞಾನಯೋಗಾನಂದ

ನೆರವು: ಆರ್. ಎಸ್. ಪೂರ್ಣಾನಂದ, ಡಾ. ಕೆ. ಎಲ್. ಪ್ರಸನ್ನಾಕ್ಷೀ, ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ: ಶ್ರೀರಾಮಕೃಷ್ಣ ಆಶ್ರಮ, ಮೈಸೂರು ಮುದ್ರಣ: ಮಯೂರ್ ಗ್ರಾಫಿಕ್ಸ್, ಬೆಂಗಳೂರು

ಮುಖಪುಟ

ಶ್ರೀರಾಮಕೃಷ್ಣ ಮಂದಿರ, ಕಾಮಾರಪುಕುರ

**ಚಂದಾ ವಿವರ**

ಬಿಡಿ ಪ್ರತಿ : ₹14 ವಾರ್ಷಿಕ : ₹ 140 ಮೂರು ವರ್ಷ : ₹ 375
ಆಜೀವ (25 ವರ್ಷ) : ₹3,000 ಪೋಷಕರು : ₹5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್) ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300 ಪೋಷಕರು : $ 600 ಅಥವಾ ಹೆಚ್ಚು.

**ಈ ಪತ್ರಿಕೆಯ ಧ್ಯೇಯ**

‘ನಾವು ಪತ್ರಿಕೆಯ ಮೂಲಕ ಸಕಲ ವಿಚಾರ ಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.’

– ಸ್ವಾಮಿ ವಿವೇಕಾನಂದ

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

E-mail: mysuru.vivekaprabha@rkmm.org Website: www.vivekaprabha.net ಫೋನ್ : 9481533505

## ಪ್ರಾರ್ಥನೆ

# ರಾಮಕೃಷ್ಣ ರಕ್ಷಿಸೈ

ಪರಮಹಂಸ ರಾಮಕೃಷ್ಣ
ಕರುಣೆದೋರಿ ಸಲಹು ಬೇಗ
ಶಿರವ ಬಾಗಿ ಬೇಡುತಿರ್ಪೆ
ಗುರುವೆ ರಕ್ಷಿಸೈ ॥ ೧ ॥

ಪಾಪಿಯೆನುತ ಕೈಯ ಬಿಡದೆ
ರೂಪನಾಮಗಳನು ಕಳಚಿ
ಕಾಪಿಡೆಂದು ಕರವ ಮುಗಿವೆ
ತಾಪ ನೂಕೆಲೈ ॥ ೨ ॥

ಶಿಷ್ಟನಿಯಮಗಳನು ಬಿಟ್ಟು
ದುಷ್ಟಜನರ ಮಧ್ಯ ಬಾಳ್ವ
ಭ್ರಷ್ಟತನವ ಭರದಿ ಬಿಡಿಸಿ
ಕಷ್ಟ ನೀಗೆಲೈ ॥ ೩ ॥

ನೀಗಿ ನೀತಿನಿಯಮಗಳನು
ಭೋಗಕಾಗಿ ಪಾಪಗೈದೆ
ಯೋಗಿ ರಾಮಕೃಷ್ಣವರ್ಯ
ಬೇಗ ಕಾಪಿಡೈ ॥ ೪ ॥

ಘೋರನರಕದೊಳಗೆ ಸಿಲುಕಿ
ಚೀರುತಿರುವೆ ಹೊರಗೆ ಬರಲು



ಮಾರವೈರಿಸಾಮ್ಯರೂಪ
ದಾರಿ ತೋರೆಲೈ ॥ ೫ ॥

ಯೋನಿಮುಖದಿ ಬುವಿಗೆ ಬಂದು
ಮಾನಗೆಟ್ಟೆ ನೂರುಬಾರಿ
ಮೌನಿವರನೆ ಬಿಡಿಸಲದನು
ನೀನೆ ಶಕ್ತನೈ ॥ ೬ ॥

ಬುವಿಗೆ ಮರಳಿ ಮರಳಿ ತೆವಳಿ
ನವೆದು ನವೆದು ಸಾಯಲಾರೆ
ಜವನ ಸ್ಮರನ ಬಾಧೆಗಳನು
ಜವದಿ ಬಿಡಿಸಲೈ ॥ ೭ ॥

ಎನಿತು ಸಾರಿಯೆನುತ ನಾನು
ತನುವ ತೊಟ್ಟು ಕಷ್ಟಪಡಲಿ
ಕನಿಕರಿಸುತಲೊಡನೆ ನೀಗು
ಜನಿಸಲಾರೆನೈ ॥ ೮ ॥

ರಕ್ತಿಯಾಂತು ವಿಷಯಗಳಲಿ
ಶಕ್ತಿಪೂರ್ಣ ಕುಂದಿಹೋಯ್ತು
ಭಕ್ತಿಯಿಂದ ಬೇಡಿಕೊಂಬೆ
ಮುಕ್ತಿ ನೀಡಲೈ ॥ ೯ ॥

— ಕುಮಾರ ನಿಜಗುಣ ಸ್ವಾಮಿಗಳು

## ಸೂಕ್ತಿಪ್ರಭ

**ಒ**ದ್ದೆಯಾದ ಬೆಂಕಿಯ ಕಡ್ಡಿಯನ್ನು ಎಷ್ಟು ಸಲ ಗೀಚಿದರೂ ಹತ್ತುವುದಿಲ್ಲ. ಸುಮ್ಮನೆ ಮುರಿದು ಹೋಗುವುದು. ಆದರೆ ಒಣಗಿದ ಬೆಂಕಿಯ ಕಡ್ಡಿಯನ್ನು ಒಂದು ಸಲ ಗೀಚಿದರೆ ಸಾಕು, ಹತ್ತುವುದು. ಹಾಗೆಯೇ ಕಪಟವಿಲ್ಲದ ಸತ್ಯವಂತರಾದ ಶುದ್ಧಾತ್ಮರು ಪ್ರಾಪಂಚಿಕ ಆಸೆಗೆ ಒಳಗಾಗದ ಒಣಗಿದ ಬೆಂಕಿಯ ಕಡ್ಡಿಯಂತೆ. ಒಂದು ಸಲ ದೇವರ ಹೆಸರನ್ನು ಹೇಳಿದರೆ ಸಾಕು ಅವರ ಹೃದಯದಲ್ಲಿ ಪರಮಾತ್ಮನ ಪ್ರೇಮ ಉದಯಿಸುವುದು. ಕಾಮಕಾಂಚನ ಪಾಶದಲ್ಲಿ ಸಿಕ್ಕಿರುವ ಪ್ರಾಪಂಚಿಕನ ಮನಸ್ಸಾದರೋ ಒದ್ದೆಯಾದ ಬೆಂಕಿ ಕಡ್ಡಿಯಂತೆ. ನೂರು ವೇಳೆ ಅವರಿಗೆ ದೇವರ ವಿಷಯವನ್ನು ಕುರಿತು ಬೋಧನೆ ಮಾಡಿದರೂ ಭಕ್ತಿಯನ್ನು ಹುಟ್ಟಿಸಲು ಆಗುವುದಿಲ್ಲ.

– ಶ್ರೀರಾಮಕೃಷ್ಣರು *('ಶ್ರೀಗುರುದೇವರ ವಚನ'ದಿಂದ)*

**ಚೆ**ನ್ನಾಗಿ ಅನುಷ್ಠಾನ ಮಾಡಿದ ಪರಧರ್ಮಕ್ಕಿಂತ, ಗುಣರಹಿತವಾಗಿ ಅನುಷ್ಠಾನ ಮಾಡಿದ ಸ್ವಧರ್ಮವೇ ಶ್ರೇಯಸ್ಕರ. ಸ್ವಧರ್ಮವನ್ನು ಆಚರಿಸುತ್ತಾ ಮರಣ ಹೊಂದುವುದಾದರೂ ಉತ್ತಮ; ಆದರೆ ಪರಧರ್ಮ ಭಯಂಕರವಾದದ್ದು.

– ಶ್ರೀಕೃಷ್ಣ *(ಭಗವದ್ಗೀತೆಯಲ್ಲಿ)*

**ಸು**ಖಿಗಳಲ್ಲಿ ಮೈತ್ರಿಯನ್ನೂ, ದುಃಖಿಗಳಲ್ಲಿ ಕರುಣೆಯನ್ನೂ, ಪುಣ್ಯವಂತರಲ್ಲಿ ಹರ್ಷವನ್ನೂ, ಪಾಪಿಗಳಲ್ಲಿ ಉಪೇಕ್ಷೆಯನ್ನೂ ಭಾವಿಸುವುದರ ಮೂಲಕ ಚಿತ್ತಶಾಂತಿಯನ್ನು ಹೊಂದಬಹುದು.

– ಪತಂಜಲಿ *(ಯೋಗಸೂತ್ರಗಳು)*

**ದೈ**ವಿಕತೆಯೊಂದಿಗೆ ಒಂದಾಗಲು ಮೊದಲ ಹಾಗೂ ಖಚಿತವಾದ ಮಾರ್ಗವೇ ಪ್ರಾಮಾಣಿಕತೆ. ಪ್ರಾಮಾಣಿಕವಾಗಿ ಪ್ರಾರ್ಥಿಸಿದರೆ ಖಂಡಿತವಾಗಿಯೂ ದೈವೀ ಸಾನ್ನಿಧ್ಯ ನಿನಗೆ ದೊರಕುವುದು.

– ಶಿಂಟೋ ಬೋಧನೆ

**ನ**ಗುವುದಕ್ಕೆ ಸಮಯ ಮಾಡಿಕೋ – ಅದು ಜೀವದ ಸಂಗೀತ.

– ಐರಿಷ್ ಪ್ರಾರ್ಥನೆ

# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ).

**ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.**
**ಎಂ.ಎಲ್.ಹಳ್ಳಿ, ಸಾಗರ ತಾಲೂಕು,**
**ಶಿವಮೊಗ್ಗ ಜಿಲ್ಲೆ. ಫೋನ್: 08183-296516**
**9449921950, 9449774451**

**ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ**
**ಐ.ಬಿ. ಹತ್ತಿರ, ಹೊಸನಗರ-577418**
**ಶಿವಮೊಗ್ಗ ಜಿಲ್ಲೆ ಫೋನ್: 08185-221915**
**9449921950**

**(CBSE & State Syllabus)**

ಮಾನ್ಯ ವಿದ್ಯಾಕಾಂಕ್ಷಿಗಳೇ.

**"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸಖಂಡಗಳು, ಉಕ್ಕಿನಂತಹ ನರಗಳು, ಯಾವುದಕ್ಕೂ ಜಗ್ಗದ ಪ್ರಚಂಡ ಇಚ್ಛಾಶಕ್ತಿಯಿರುವ ಸಿಂಹ ಸದೃಶ ವ್ಯಕ್ತಿಗಳು. ಇಂತಹ ವ್ಯಕ್ತಿಗಳ ನಿರ್ಮಾಣ, ಸಮಗ್ರ ಶಿಕ್ಷಣದಿಂದ ಮಾತ್ರ ಸಾಧ್ಯ"** ಎಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯಪಟ್ಟಿದ್ದಾರೆ. ಇಂತಹ ಶಿಕ್ಷಣದ ಧ್ಯೇಯವನ್ನಿಟ್ಟುಕೊಂಡು ಧೀಮಂತ ಸುಸಂಸ್ಕೃತ, ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣವನ್ನು ನೀಡುತ್ತಿವೆ, ಮೇಲ್ಕಂಡ ಶ್ರೀ ರಾಮಕೃಷ್ಣ ವಿದ್ಯಾಸಂಸ್ಥೆಗಳು.

ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ವಸತಿ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕ್ರಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ಸಂಸ್ಥೆಗಳು ಮಕ್ಕಳನ್ನು ಅಕ್ಕರೆಯಿಂದ, ಮಮತೆಯಿಂದ ಪೋಷಿಸಿ ಅವರ ಅಂತರಂಗದಲ್ಲಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನು ರೂಪಿಸುತ್ತಿವೆ. ದೇಶಾದ್ಯಂತ ಖ್ಯಾತಿ ಹೊಂದಿರುವ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.



1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:-** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಾಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :-** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:-** ಎಲ್.ಕೆ.ಜಿ. ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಮತ್ತು ಸಿಬಿಎಸ್ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:-**
* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವಂತೆ ಮಾಡುತ್ತಿರುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದು.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿ ವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ ಪಡೆಯುತ್ತಿರುವುದು.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ ವಹಿಸಿರುವುದು.

5) **ವಸತಿ ಶಾಲೆಗೆ ಪ್ರವೇಶ:-**
* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ.
* CBSE & State Syllabus
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿದೆ.

6) **ಪ್ರವೇಶ ಕ್ರಮ:-**
* ಪ್ರವೇಶ ಪರೀಕ್ಷೆ, ಸಂದರ್ಶನ ಆಧಾರದ ಮೇಲೆ.
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಅನ್ನು ರೂ. 200 ಡಿ.ಡಿ. ಮೂಲಕ **ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್** (ರಿ) ಹೆಸರಿಗೆ ಕಳುಹಿಸಿ ಪಡೆಯಬಹುದು.
* ಪ್ರವೇಶ ಪರೀಕ್ಷೆ : ಹೊಸನಗರದಲ್ಲಿ ದಿ. 29-04-2018 ರಂದು ಬೆಳಿಗ್ಗೆ 10ಕ್ಕೆ.
  : ಎಂ.ಎಲ್. ಹಳ್ಳಿ ಸಾಗರದಲ್ಲಿ ದಿ. 02-05-2018 ರಂದು ಬೆಳಗ್ಗೆ10ಕ್ಕೆ

ಹೆಚ್ಚಿನ ಮಾಹಿತಿಗೆ ಶಾಲೆಯನ್ನು ಸಂಪರ್ಕಿಸಿ:
http://ramakrishnagurukulaashramasag.in/

ವ್ಯವಸ್ಥಾಪಕರು

**ನಮ್ಮ CBSE ಶಾಲೆಗಳು : 1. Sri Ramakrishna Vivekananda Residential International School, M.L.Halli, Sagar**
**2. Sri Ramakrishna Residential School, Hosanagara.**







# SRI RAMAKRISHNA ADVAITA ASHRAMA

Ashrama Road, Kalady -683574, Dist. Ernakulam, Kerala
Email: kalady@rkmm.org Ph: 0484-2462345/2461071

## ಭಕ್ತರು ಹಾಗೂ ಹಿತೈಷಿಗಳಲ್ಲಿ ಒಂದು ವಿಜ್ಞಾಪನೆ



ಕಾಲಡಿಯು ಶಿವನ ಅವತಾರವಾದ, ಮಹಾನ್ ಆಧ್ಯಾತ್ಮಿಕ ವ್ಯಕ್ತಿಯೂ, ಅದ್ವೈತ ವೇದಾಂತದ ಸಂಸ್ಥಾಪಕರೂ ಆದ ಆದಿ ಶಂಕರಾಚಾರ್ಯರ ಜನ್ಮಸ್ಥಳವಾಗಿದೆ. ಆಶ್ರಮವು ಪೂರ್ಣಾನದಿಯ ದಡದಲ್ಲಿದೆ. 1936ರಲ್ಲಿ ಆರಂಭವಾದ ಈ ಆಶ್ರಮವು 1941ರಲ್ಲಿ ಬೇಲೂರು ಮಠದ ರಾಮಕೃಷ್ಣ ಮಠಕ್ಕೆ ಸೇರ್ಪಡೆಗೊಂಡಿತು. ಸ್ವಾಮಿ ಬ್ರಹ್ಮಾನಂದರ ಶಿಷ್ಯರಾಗಿದ್ದ ಸ್ವಾಮಿ ಆಗಮಾನಂದರು ಈ ಆಶ್ರಮದ ಸ್ಥಾಪಕ ಅಧ್ಯಕ್ಷರಾಗಿದ್ದರು. ಆಶ್ರಮವು ಆರಂಭವಾದ ನಂತರ ಅದು ಕೇರಳದಲ್ಲಿ ಆಧ್ಯಾತ್ಮಿಕತೆ, ಸಾಮಾಜಿಕ ಅಭಿವೃದ್ಧಿ ಹಾಗೂ ಸೇವಾಕಾರ್ಯಗಳ ಒಂದು ಮುಖ್ಯ ಕಾರ್ಯಕ್ಷೇತ್ರವೆನಿಸಿದೆ. ಕಳೆದ 77 ವರ್ಷಗಳಿಂದ ನಾವು ಸಮಾಜ ಕಲ್ಯಾಣ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಮೂಲ್ಯ ಸೇವೆಯನ್ನು ಅನವರತ ಸಲ್ಲಿಸುತ್ತಿದ್ದೇವೆ.

ಆಶ್ರಮವು ವಿವಿಧ ಶೈಕ್ಷಣಿಕ ಸಂಸ್ಥೆಗಳ, ವಿದ್ಯಾರ್ಥಿನಿಲಯ, ಸಮಾಜ ಕಲ್ಯಾಣ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರಗಳ ಮೂಲಕ ವೈವಿಧ್ಯಮಯವಾದ ಸಮಾಜಸೇವಾ ಕಾರ್ಯಗಳನ್ನು ನಡೆಸುತ್ತಿದೆ. ಈ ಆಶ್ರಮದ ಆವರಣದಲ್ಲಿ ವಿಶ್ವಭಾವೈಕ್ಯ ಮಂದಿರ, ಸಭಾಂಗಣಗಳು ಹಾಗೂ ಶಾಲೆಗಳಿವೆ. (ಶಾಲೆಯಲ್ಲಿ ಕಿಂಡರ್‌ಗಾರ್ಟನ್ ನಿಂದ +2 ವರೆಗಿನ ವಿದ್ಯಾರ್ಥಿಗಳು ಓದುತ್ತಿದ್ದಾರೆ. ಅವರಿಗೆ ಶಾಲಾವಾಹನ, ಕ್ರೀಡಾಂಗಣ, ಗ್ರಂಥಾಲಯ ಮೊದಲಾದ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.) 1966ರಿಂದ ಆಶ್ರಮವು ಬಡಕಟ್ಟು ವಿದ್ಯಾರ್ಥಿನಿಲಯವನ್ನು ನಡೆಸುತ್ತಿದೆ. ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗಾಗಿ ಒಂದು ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರವನ್ನೂ ಆಶ್ರಮ ನಡೆಸುತ್ತಿದ್ದು, ಅದು ಅವರಿಗೆ ಸರ್ಕಾರಿ ಹಾಗೂ ಖಾಸಗಿ ಕಂಪೆನಿಗಳಲ್ಲಿ ಉದ್ಯೋಗ ಪಡೆಯಲು ನೆರವಾಗುತ್ತಿದೆ. ಮುವಾಟ್ಟುಪುಳ ಎಂಬಲ್ಲಿ ಈ ಆಶ್ರಮದ ಉಪಕೇಂದ್ರವೂ ಕಾರ್ಯ ನಿರ್ವಹಿಸುತ್ತಿದೆ.

ಈ ಮೇಲಿನ ಚಟುವಟಿಕೆಗಳನ್ನು ನಡೆಸಿಕೊಂಡು ಬರಲು ಆಶ್ರಮವು ಪ್ರಧಾನವಾಗಿ ನಿಮ್ಮಂತಹ ಭಕ್ತರ ಹಾಗೂ ಹಿತೈಷಿಗಳ ಆರ್ಥಿಕ ನೆರವನ್ನೇ ಆಶ್ರಯಿಸಬೇಕಾಗಿದೆ. ಹಲವು ಬಾರಿ ದಾನ-ದತ್ತಿಗಳ ಕೊರತೆ, ಹಣದುಬ್ಬರ ಮುಂತಾದ ಕಾರಣಗಳಿಂದ ಆರ್ಥಿಕ ಕೊರತೆಯ ಪರಿಸ್ಥಿತಿಯುಂಟಾಗಿದೆ. ಈ ಕಾರಣಗಳಿಂದ ತಾವು ನಮ್ಮ ಉದಾತ್ತ ಸೇವಾಕಾರ್ಯಗಳಿಗೆ ನೆರವಾಗುವಂತೆ, ಉದಾರವಾಗಿ ಧನಸಹಾಯ ಮಾಡಲು ಹಾಗೂ ತಮ್ಮ ಬಂಧು-ಮಿತ್ರರಿಗೂ ಈ ದಿಕ್ಕಿನಲ್ಲಿ ಪ್ರೇರಣೆ ನೀಡಲು ತಮ್ಮನ್ನು ಕಳಕಳಿಯಿಂದ ವಿನಂತಿಸಿಕೊಳ್ಳುತ್ತಿದ್ದೇವೆ.

| ಕ್ರ. ಸಂ. | ಚಟುವಟಿಕೆ | ವಾರ್ಷಿಕ ವೆಚ್ಚವನ್ನು ಪೂರೈಕೆ ಮಾಡಲು ತಗಲುವ ಕನಿಷ್ಠ ಧನಸಹಾಯ |
|---|---|---|
| 1. | ನಿತ್ಯ ಸೇವಾಕಾರ್ಯಗಳು – ಶ್ರೀರಾಮಕೃಷ್ಣರ ಪೂಜೆ, ಜಯಂತಿ ಉತ್ಸವಗಳು, ಆಶ್ರಮ ನಿವಾಸ-ನಿರ್ವಹಣೆ, ನಿತ್ಯ ಅನ್ನದಾನ ಹಾಗೂ ಸಾಧುಸೇವೆ. | 10 ಲಕ್ಷ ರೂ. |
| 2. | ಶೈಕ್ಷಣಿಕ – ಶಾಲಾ ಚಟುವಟಿಕೆಗಳ ನಿರ್ವಹಣೆ, ಕಟ್ಟಡಗಳ ನಿರ್ವಹಣೆ, ಶಾಲಾ ಚಟುವಟಿಕೆಗಳ ಆಧುನೀಕರಣ ಹಾಗೂ ಉನ್ನತೀಕರಣ, ಬಡ ವಿದ್ಯಾರ್ಥಿಗಳಿಗೆ ನೆರವು ನೀಡುವ ನಿಧಿ, ಸ್ಕಾಲರ್‌ಶಿಪ್ ಇತ್ಯಾದಿ. | 15 ಲಕ್ಷ ರೂ. |
| 3. | ಸಮಾಜ ಅಭಿವೃದ್ಧಿ ಹಾಗೂ ಕಲ್ಯಾಣ ಸೇವಾಕಾರ್ಯಗಳು – ಶ್ರೀರಾಮಕೃಷ್ಣ ಗುರುಕುಲಂ ವಿದ್ಯಾರ್ಥಿನಿಲಯದ ಖರ್ಚುವೆಚ್ಚಗಳು, ಪರಿಶಿಷ್ಟ ವರ್ಗ ಕಲ್ಯಾಣ, ಪರಿಶಿಷ್ಟ ಜಾತಿ ತರಬೇತಿ ಕೇಂದ್ರ, ಕಂಪ್ಯೂಟರ್ ಹಾಗೂ ಬೆರಳಚ್ಚು ತರಬೇತಿ ಕೇಂದ್ರ, ಬಡವರಿಗೆ ಹಾಗೂ ವಿಧವೆಯರಿಗೆ ಆರ್ಥಿಕ ನೆರವು ಇತ್ಯಾದಿ. | 25 ಲಕ್ಷ ರೂ. |

ತಮ್ಮ ದೇಣಿಗೆಯನ್ನು ನೀವು ಚೆಕ್/ಡಿ.ಡಿ.(''Sri Ramakrishna Advaita Ashrama'' ಹೆಸರಿನಲ್ಲಿ), ಇಲೆಕ್ಟ್ರಾನಿಕ್ ವರ್ಗಾವಣೆ ಮೂಲಕ ಕಳುಹಿಸಬಹುದು. (Canara Bank, Kalady IFSC Code CNRB0002921 Account Number 2921101005444.) ದೇಣಿಗೆಯನ್ನು ಕಳುಹಿಸಿದ ಬಳಿಕ ತಮ್ಮ ಹೆಸರು, ಪೂರ್ಣ ವಿಳಾಸ, ಪ್ಯಾನ್ ನಂಬರ್ ಇವನ್ನು kalady@rkmm.org ಈ ವಿಳಾಸಕ್ಕೆ ಇ-ಮೇಲ್ ಮೂಲಕ ಕಳುಹಿಸಿಕೊಡಬೇಕು. ನೀವು ನೀಡುವ ದೇಣಿಗೆಯು ಆದಾಯ ತೆರಿಗೆ ಕಾಯಿದೆಯ u/s 80G ತೆರಿಗೆ ವಿನಾಯಿತಿ ಪಡೆಯಲು ಅರ್ಹ ವಾಗಿರುತ್ತದೆ. ರೂ.10,000/- ಕ್ಕೂ ಹೆಚ್ಚಿನ ಮೊತ್ತವನ್ನು ದತ್ತಿಯನ್ನಾಗಿ ಪರಿಗಣಿಸಿ ಸ್ವೀಕರಿಸಲಾಗುವುದು.

ಭಗವಾನ್ ಶ್ರೀರಾಮಕೃಷ್ಣರು ನಿಮ್ಮ ಎಲ್ಲ ಕಾರ್ಯಚಟುವಟಿಕೆಗಳಲ್ಲಿ ತಮ್ಮ ಕೃಪೆಯನ್ನು ಹರಿಸಲಿ ಎಂಬುದೇ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.

ಭಗವತ್ಸೇವೆಯಲ್ಲಿ ತಮ್ಮ,
ಸ್ವಾಮಿ ಶ್ರೀವಿದ್ಯಾನಂದ
ಅಧ್ಯಕ್ಷರು



# ಆಧುನಿಕ ಪ್ರವೃತ್ತಿ ಮತ್ತು ಸನಾತನ ತತ್ತ್ವ

## ಚಲನಶೀಲ ಬದುಕು

ಬದುಕು ನಿಂತ ನೀರಲ್ಲ. ಸದಾ ಹರಿಯುತ್ತಿರುವುದೇ ನದಿಯ ಸ್ವಭಾವ. ಜೀವನವೆಂಬುದು ನದಿಯಂತೆ; ಪ್ರತಿ ಕ್ಷಣವೂ ಬದಲಾಗುತ್ತಿರುವುದು ಅದರ ಲಕ್ಷಣ. ಹಾಗಿದ್ದರೂ, ಮಾನ ವನು ತನ್ನ ಅನುಭವಗಳಿಂದ ಕಂಡುಕೊಂಡ ಕೆಲವು ಅಮೂಲ್ಯ ಸತ್ಯಗಳನ್ನು ತಲೆಮಾರಿನಿಂದ ತಲೆಮಾರಿಗೆ ದಾಟಿಸುತ್ತಾನೆ. ಅಂಥ ಅಮೂಲ್ಯ ಪಾಠಗಳನ್ನು ಅರಿತು ನಡೆದರೆ ಉನ್ನತಿಯಾಗುತ್ತದೆ ಎಂದು ಕಲಿಸುತ್ತ ಬಂದಿದ್ದಾನೆ. ಈ ಅನುಭವಗಳ ಪಾಠವನ್ನೇ 'ವಿದ್ಯೆ'ಯೆನ್ನುತ್ತೇವೆ. ವೃತ್ತಿಪರ ತಿಳುವಳಿಕೆ, ವಿಜ್ಞಾನ, ಶಾಸ್ತ್ರ ಗಳಿಂದ ಹಿಡಿದು ವೇದ-ವೇದಾಂಗಗಳು ಹಾಗೂ ಅಲೌಕಿಕ ವಿದ್ಯೆ ಗಳಾದ ಯೋಗ-ಅಧ್ಯಾತ್ಮಗಳೂ ಈ ವ್ಯಾಪ್ತಿಯಲ್ಲೇ ಬರುತ್ತವೆ.

ಹಲವು ಕಾಲಘಟ್ಟಗಳಲ್ಲಿ ಮಾನವ ಜೀವನ ಬದಲಾದಂತೆ ಸುತ್ತಣ ಜಗತ್ತೂ ಬದಲಾಗುತ್ತದೆ. ಪರಿಸರಕ್ಕೆ ತಕ್ಕಂತೆ ಮಾನವನೂ ಬದಲಾಗುತ್ತಾನೆ, ಅವನ ಮಾನಸಿಕ ಸ್ಥಿತಿಗಳೂ ಬದಲಾಗುತ್ತವೆ. ಆದರೂ ಕೆಲವೊಂದು ವಿಚಾರಗಳು ಎಲ್ಲ ಕಾಲಕ್ಕೂ ಸಲ್ಲುವ, ಎಲ್ಲ ಮಾನವರಿಗೂ ಸಮಾನವೆನಿಸುವ ಸತ್ಯಗಳಾಗಿ ನಿಲ್ಲುತ್ತವೆ. ಇವು ಕಾಲ-ದೇಶಗಳ ವ್ಯತ್ಯಾಸವನ್ನು ಮೀರಿ ನಿಲ್ಲುವುದರಿಂದ ಸಾರ್ವ ಕಾಲಿಕ, ಸಾರ್ವತ್ರಿಕ ಸತ್ಯ ಅಥವಾ ನಿಯಮಗಳೆನಿಸುತ್ತವೆ. ಲೌಕಿಕ ಅರ್ಥದಲ್ಲಿ ಈ ನಿಯಮಗಳು ಭೌತಿಕ ಪ್ರಪಂಚಕ್ಕೆ ಸೀಮಿತ ವಾದರೆ, ಅಲೌಕಿಕ ಅರ್ಥದಲ್ಲಿ ಅವು ಆಧ್ಯಾತ್ಮಿಕ ಪ್ರಪಂಚಕ್ಕೆ ಸೇರಿರುತ್ತವೆ. ಭಾರತದಲ್ಲಿ ಬೆಳೆದು ಬಂದ ಸನಾತನ ಸಂಸ್ಕೃತಿಯಲ್ಲಿ ಎರಡನೇ ಹಂತದ ಆಧ್ಯಾತ್ಮಿಕ ನಿಯಮಗಳೇ ಭೌತಿಕ ಹಾಗೂ ಆಧ್ಯಾತ್ಮಿಕ ಜಗತ್ತುಗಳೆರಡನ್ನೂ ನಿಯಂತ್ರಿಸುತ್ತವೆ. ನಮ್ಮ ಸಂಸ್ಕೃತಿ ಯಲ್ಲಿ ಆಧ್ಯಾತ್ಮಿಕ ತತ್ತ್ವ, ನಿಯಮಗಳು ಬದಲಾಗಲಾರವು; ಎಲ್ಲ ಕಾಲಕ್ಕೂ ಅವು ಸಲ್ಲುತ್ತವೆ. ಲೌಕಿಕ ನಿಯಮಗಳು ಕಾಲ-ದೇಶ ಗಳಿಗೆ ಅನುಗುಣವಾಗಿ ಬದಲಾಗುತ್ತವೆ. ಮೊದಲನೆಯ ತತ್ತ್ವ ಗಳನ್ನು 'ಶ್ರುತಿ' ಎಂದೂ, ಎರಡನೆಯದನ್ನು 'ಸ್ಮೃತಿ' ಎಂದೂ ಕರೆದರು. ಪ್ರಪಂಚ ಬದಲಾಗುತ್ತದೆ; ಆದರೆ ಸತ್ಯ ಬದಲಾಗದು. ಇದು ಸನಾತನ ಧರ್ಮದ ಸಂದೇಶ.

## ಆಧುನಿಕತೆ : ಅದು ಒಳಿತೆ?

ಹಲವು ಬಾರಿ ಹೊಸತಾದದ್ದು, ನೂತನವಾದದ್ದು ಜಗತ್ತಿನಲ್ಲಿ ಹೆಸರು ಮಾಡುತ್ತದೆ. 'ತೀರ ಆಧುನಿಕ' ಎಂದು ಹೇಳಿಕೊಳ್ಳು ತ್ತಲೇ ಹಲವರು ಸಂಪಾದನೆ ಮಾಡುತ್ತಾರೆ. ವಾಣಿಜ್ಯ-ವ್ಯವಹಾರ ಜಗತ್ತಿನಲ್ಲಿ ಆಧುನಿಕ, 'ಲೇಟೆಸ್ಟ್' ಆದುದೆಲ್ಲ ಉತ್ತಮವೆಂದೂ, ಅದನ್ನು ಅಳವಡಿಸಿಕೊಳ್ಳುವವರೆಲ್ಲ ಆಧುನಿಕರು ಹಾಗೂ ಉಳಿ ದವರಿಗಿಂತ ಭಿನ್ನರು ಎಂದೂ ಎನಿಸಿಕೊಳ್ಳುತ್ತಾರೆ. ಮುಖ್ಯವಾಗಿ, ಯುವಕರಲ್ಲಿ 'ಆಧುನಿಕ'ರೆನಿಸಿಕೊಳ್ಳುವ, ಉಳಿದವರ ನಡುವೆ ಗುರುತಿಸಿಕೊಳ್ಳುವ ಪ್ರವೃತ್ತಿ ಪ್ರಬಲವಾಗಿರುತ್ತದೆ. ಅವರಿಗೆ ಆಧು ನಿಕವಾದುದೆಲ್ಲ ಬೇಕು. ಇದಕ್ಕೆ ತಕ್ಕ ರೀತಿಯಲ್ಲಿ ಹೊಸ ಹೊಸ ವಸ್ತುಗಳನ್ನು ತಯಾರಿಸುವ, ಅವನ್ನು ಮಾರುಕಟ್ಟೆಗೆ ಬಿಡುವ ಕಂಪೆನಿಗಳೆಲ್ಲ 'ಆಧುನಿಕ', 'ಲೇಟೆಸ್ಟ್', 'ತೀರ ಹೊಸತು' ಎಂಬ ಹಣೆಪಟ್ಟಿಯಿಂದಲೇ ತಮ್ಮ ವಸ್ತುಗಳನ್ನು ಜನರಿಗೆ ಪರಿಚಯಿಸು ತ್ತವೆ. ಆದರೆ ಅವುಗಳು ಎಷ್ಟು ಕಾಲ ಹೊಸತಾಗಿ ಉಳಿಯಬಲ್ಲವು? ಕೆಲವೇ ದಿನಗಳಲ್ಲಿ ಅವುಗಳನ್ನೂ ಹಿಂದಿಕ್ಕುವ ಹಲವಾರು ಹೊಸ ವಸ್ತುಗಳು ಬರುತ್ತವೆ. ಹೊಸತೆಲ್ಲವೂ ಒಳಿತಾಗಬೇಕಿಲ್ಲ. ಬಾಳಿಕೆ ಬಾರದ, ಗುಣಮಟ್ಟವಿಲ್ಲದ ವಸ್ತುಗಳು ತಿರಸ್ಕೃತವಾಗುತ್ತವೆ. ಆಧುನಿಕವೆಂಬ ಪ್ರವೃತ್ತಿಯ ಬೆಲೆಯೂ ಇಷ್ಟೆಯೇ. ಯಾವ ಒಂದು ಮೌಲಿಕ ವಸ್ತು ಅಥವಾ ವಿಷಯದಲ್ಲಿಯೂ ಸ್ಥಿರವಾಗಿ ನಿಲ್ಲದೆ, ಹೊಸದಾಗಿ ಏನು ಬಂದರೂ ಅದನ್ನು ಆತುಕೊಳ್ಳುವ ಪ್ರವೃತ್ತಿಯು ಸತ್ತ್ವವುಳ್ಳ, ನಿಜಕ್ಕೂ ಒಳ್ಳೆಯದಾದ ವಸ್ತು ಅಥವಾ ವಿಚಾರವನ್ನು ಹೇಗೆ ಗ್ರಹಿಸಬಲ್ಲದು? ಆಧುನಿಕತೆಯ ಭರದಲ್ಲಿ ಹಳೆಯದನ್ನೆಲ್ಲ ತಿರಸ್ಕರಿಸುವ ಪ್ರವೃತ್ತಿ ಇದೇ ಮಟ್ಟದ್ದು. ಇಲ್ಲಿ 'ಟ್ರೆಂಡ್' ಮುಖ್ಯವೇ ಹೊರತು 'ಟ್ರುತ್'(ಸತ್ಯ) ಅಲ್ಲ. ಹೀಗೆ

ತೀರ ಹೊಸತನ್ನು ಸ್ವಾಗತಿಸುವ ಭರದಲ್ಲಿ ಮೌಲಿಕವಾದುದನ್ನು ಕಳೆದುಕೊಳ್ಳುವ ಅಪಾಯವನ್ನು ಅವರು ಮನಗಾಣುವುದಿಲ್ಲ.

ಧರ್ಮ, ಸಂಸ್ಕೃತಿ, ಪರಂಪರೆಗಳ ವಿಷಯದಲ್ಲಿ ಅಶ್ರದ್ಧೆ, ತಿರಸ್ಕಾರ ಮೂಡಿಸುವ ಪ್ರವೃತ್ತಿ 'ಆಧುನಿಕತೆ'ಯಲ್ಲಿದೆ. ಹಳೆಯದಲ್ಲೆಲ್ಲವೂ ತ್ಯಾಜ್ಯವೆಂಬ ಮಾತು ಆಧುನಿಕ ಜಗತ್ತಿನಲ್ಲಿ ಹೆಚ್ಚು ಸದ್ದು ಮಾಡುತ್ತಿದೆ. ಆದರೆ ಅದರಿಂದ ನಾವು ಕಳೆದುಕೊಳ್ಳುವುದೇನು ಎಂಬುದನ್ನು ಆ ಜಗತ್ತು ತೋರಿಸಿಕೊಡುವುದಿಲ್ಲ. ಅಷ್ಟರ ಮಟ್ಟಿಗೆ ಅದು ಕುರುಡಾಗಿದೆ. ಇದರರ್ಥ ಆಧುನಿಕವೆಲ್ಲವೂ ಅಯೋಗ್ಯವೆಂದಲ್ಲ; ಹೊಸತನ್ನು ಸಮಾಜ ಎಂದಿಗೂ ಸ್ವಾಗತಿಸುತ್ತದೆ. ಆದರೆ 'ಆಧುನಿಕ'ವೆಂಬ ಪ್ರವೃತ್ತಿಯಲ್ಲಿರುವ ಕುರುಡುತನ ತೊಲಗಬೇಕು. ಜೀವನಕ್ಕೆ ಜೀವ ನೀಡುವ ಅನಿವಾರ್ಯ ಅಂಶಗಳಿಗೆ ಭಂಗ ಬಾರದಂತೆ ಹಳೆಯದನ್ನು ಉಳಿಸುವ, ಹೊಸತನ್ನು ಅದರೊಂದಿಗೆ ಬೆರೆಸುವ ಕಲೆ ನಮಗಿರಬೇಕು. ಆಗ '**ಹೊಸ ಚಿಗುರು, ಹಳೆ ಬೇರು**'ಗಳಿಂದ ಕೂಡಿದ ಮರ ಸುಂದರವಾಗಿ, ಸಮೃದ್ಧವಾಗಿ ಶೋಭಿಸುತ್ತದೆ.

### ಹೊಸ ಜಗತ್ತನ್ನು ನಿರ್ಮಿಸುವವರು

ಯಾವುದು ತನ್ನಲ್ಲಿಲ್ಲವೋ ಅದನ್ನು ಜಗತ್ತು ಬೇಡುತ್ತದೆ. ಕಾಲದ ಅಗತ್ಯವನ್ನರಿತು, ಬೇಕಾದದ್ದನ್ನು ಪೂರೈಸುವವರು ಸಮಾಜದಲ್ಲಿ ಹುಟ್ಟಿ ಬರುತ್ತಾರೆ. ಅವರೇ ಹೊಸ ಬದುಕನ್ನು ನಿರ್ಮಿಸುವವರು. ಜನರಿಗೆ ಅವರು ಹೊಸ ಬದುಕಿನ ದಾರಿ ತೋರಿಸಿಕೊಡುತ್ತಾರೆ — ಅವರ ಸುತ್ತ ಅನೇಕ ಮಂದಿ ಅನುಯಾಯಿಗಳು ಹುಟ್ಟಿಕೊಳ್ಳುತ್ತಾರೆ. ರಾಜಕೀಯ ನೇತಾರರು, ಧಾರ್ಮಿಕ ಮುಖಂಡರು, ಚಿಂತಕರು, ಕಲಾವಿದರು ಈ ರೀತಿ ಹೊಸಹೊಸ ದಾರಿಯನ್ನು ಕಂಡುಕೊಳ್ಳಬಲ್ಲವರು. ದೀರ್ಘ ಚಿಂತನೆಯ, ಚಲನಶೀಲ ಜಗತ್ತಿನ ಏರಿಳಿತಗಳನ್ನು ಅರಿತ ಪಕ್ವ ಮನಸ್ಸಿನ ಮಹಾಪುರುಷರು ಮಾತ್ರ ಇತಿಹಾಸದಲ್ಲಿ ದೀರ್ಘಕಾಲ ಉಳಿಯುತ್ತಾರೆ. ಇನ್ನು ಕಾಲ, ದೇಶ, ಪಂಥಗಳ ಎಲ್ಲೆಕಟ್ಟುಗಳನ್ನು ಮೀರಿ ಜಗತ್ತಿನ ಬಹುಭಾಗಗಳಲ್ಲಿ ತಮ್ಮ ಪ್ರಭಾವ ಬೀರುವ ಧಾರ್ಮಿಕ ಮಹಾಪುರುಷರಿದ್ದಾರೆ. ಅವರೇ ಅವತಾರಪುರುಷರು. ಬುದ್ಧ, ಶ್ರೀಕೃಷ್ಣ, ಕ್ರಿಸ್ತ, ಚೈತನ್ಯ, ಶ್ರೀರಾಮಕೃಷ್ಣ-ವಿವೇಕಾನಂದ ರಂಥವರು. ಇಡೀ ಜಗತ್ತಿನ ಜೀವನದಲ್ಲೇ ಹೊಸ ಚಲನೆಯುಂಟು ಮಾಡುವ ಶಕ್ತಿ ಇಂಥವರಲ್ಲಿ ಇರುತ್ತದೆ. ಇವರಲ್ಲೆಲ್ಲ ಸಮಾನ ಅಂಶಗಳಿವೆ — ಪ್ರಪಂಚದ ಏರಿಳಿತಗಳಲ್ಲಿ, ಹಲವು ಬಗೆಯ ಅಲ್ಲೋಲ ಕಲ್ಲೋಲಗೊಳಿಸುವ ರಾಜಕೀಯ-ಸಾಮಾಜಿಕ-ಧಾರ್ಮಿಕ ಚಲನೆಗಳಲ್ಲಿ ಅವರು ಪ್ರಪಂಚದ ಚುಕ್ಕಾಣಿ ಹಿಡಿಯುತ್ತಾರೆ. ಯಾವುದು ಸತ್ತ್ವಶಾಲಿಯೋ, ಯಾವುದು ಶಾಶ್ವತ ಸತ್ಯವೋ ಅದನ್ನು ಅವರು ಎತ್ತಿಹಿಡಿಯುತ್ತಾರೆ, ಅದಕ್ಕೆ ಅನುಸಾರವಾಗಿ ನೈತಿಕ, ಸಾಮಾಜಿಕ ಮೌಲ್ಯಗಳನ್ನು ರೂಪಿಸುತ್ತಾರೆ. ಅವರು ಬೋಧಿಸುವ ಆದರ್ಶಗಳನ್ನು ಪ್ರಪಂಚ ಸ್ವೀಕರಿಸುತ್ತದೆ. ಆಶ್ಚರ್ಯದ ಸಂಗತಿಯೆಂದರೆ, ಅತ್ಯಂತ ಪುರಾತನ ತತ್ತ್ವ, ವಿಚಾರ, ಸತ್ಯಗಳನ್ನೇ ಅವರು ಬೋಧಿಸುತ್ತಿದ್ದರೂ ಪ್ರಪಂಚದ ಪಾಲಿಗೆ ಅದು ನಿತ್ಯನೂತನವೆನಿಸುತ್ತದೆ. ಹೀಗೆ ಅದನ್ನು ಹೊಸ ರೂಪದಲ್ಲಿ ನೀಡುವ ಚಮತ್ಕಾರ ಅಂಥ ಮಹಾಪುರುಷರಿಗೆ ಸಿದ್ಧಿಸಿರುತ್ತದೆ. 'ಹಳೆಯ ಬಾಟಲಿಯಲ್ಲಿ ಹೊಸ ಮದ್ಯ'ವೆಂಬ ಪಾಶ್ಚಾತ್ಯರ ನುಡಿಗಟ್ಟು ತಮಾಷೆಯದಾಗಿದ್ದರೂ, ಪ್ರಪಂಚದ ಹಲವು ವಿದ್ಯಮಾನಗಳಿಗೆ ಸಂಬಂಧಪಟ್ಟಂತೆ ಅದು ವಾಸ್ತವ ವಿಚಾರ. ಬುದ್ಧಿವಂತರು ಶಾಶ್ವತವೂ ಸತ್ತ್ವಪೂರ್ಣವೂ ಆದ ತತ್ತ್ವಗಳನ್ನು ತಾತ್ಕಾಲಿಕವಾದ ತತ್ತ್ವ, ನಿಯಮಗಳಿಂದ ಪ್ರತ್ಯೇಕಿಸಿ, ಎರಡಕ್ಕೂ ಯೋಗ್ಯ ಸ್ಥಾನ ನೀಡುತ್ತಾರೆ. ಬದುಕಿನಲ್ಲಿ ಅವುಗಳನ್ನು ಅಳವಡಿಸಿಕೊಳ್ಳುತ್ತಾರೆ. ಆದರೆ, ಬದಲಾಗುವ ಪ್ರಪಂಚದೊಂದಿಗೆ ತಾವೂ ಬದಲಾಗುತ್ತ, ಕಾಲದ ನಾಟ್ಯಕ್ಕೆ ತಕ್ಕಂತೆ ತಾವೂ ಆಧುನಿಕತೆಯ ನಾಟ್ಯವಾಡುವ ಮಂದಿ ಹಲವು ಬಾರಿ ಅದೇ 'ಹಳೆಯ ಮದ್ಯ'ವನ್ನು ಹೊಸ ರೂಪದಲ್ಲಿ ಸೇವಿಸಿ, ಅರಿವಿಲ್ಲದೆಯೇ ಮಹಾಪುರುಷರ ಪ್ರಭಾವಕ್ಕೆ ಒಳಗಾಗುತ್ತಾರೆ; ತಾವು ಹೊಸದಾದ ವಸ್ತು-ವಿಚಾರವನ್ನೇ ಸ್ವೀಕರಿಸಿದ್ದೇವೆ ಎಂದು ಭಾವಿಸುತ್ತಾರೆ. ಆದರೆ ಪ್ರಜ್ಞಾಪೂರ್ವಕವಾಗಿ ಶಾಶ್ವತವಾದುದನ್ನು ಅರಸುವ ವಿವೇಕಿಗಳ ಸಂಖ್ಯೆ ಎಂದಿಗೂ ಕಡಿಮೆಯೇ.

### ಬದಲಾಗದ ಸತ್ಯ : ಅದರ ಸ್ವರೂಪವೇನು?

ಯಾವ ಕಾಲಕ್ಕೂ, ಯಾವ ದೇಶಕ್ಕೂ ಅಥವಾ ಯಾವ ಸನ್ನಿವೇಶಕ್ಕೂ ಅನ್ವಯವಾಗುವ ಕೆಲವು ತತ್ತ್ವಗಳಿವೆ. ಭೌತಿಕ ಜಗತ್ತಿನಲ್ಲಿ ಗುರುತ್ವಾಕರ್ಷಣೆಯ ನಿಯಮ, ಭೌತಶಾಸ್ತ್ರ-ರಸಾಯನ ಶಾಸ್ತ್ರಗಳ ಹಾಗೂ ಗಣಿತಶಾಸ್ತ್ರದ ನಿಯಮಗಳಿರುವಂತೆ, ಆಧ್ಯಾತ್ಮಿಕ ಜಗತ್ತಿನ ತತ್ತ್ವಗಳನ್ನು ವೇದಗಳಲ್ಲಿ ಕ್ರೋಡೀಕರಿಸಲಾಗಿದೆ. ಭೌತಿಕ ಜಗತ್ತೇ ನಿರಂತರ ಬದಲಾವಣೆಗೆ ಒಳಗಾಗುವುದರಿಂದ, ಅಲ್ಲಿನ ವೈಜ್ಞಾನಿಕ ನಿಯಮಗಳೂ ಕಾಲ-ದೇಶ ಬದಲಾವಣೆಗೆ ಒಳಪಡಬೇಕಾಗುವುದು. ಆದರೆ ಆಧ್ಯಾತ್ಮಿಕ ಜಗತ್ತಿನ ನಿಯಮಗಳು ಹೀಗಲ್ಲ. ಕಾಲ-ದೇಶಗಳನ್ನು ಮೀರಿದ ಶಕ್ತಿಯೊಂದಕ್ಕೆ ಅವು ಒಳಪಟ್ಟಿವೆ; ಪ್ರಪಂಚ ನಾಶವಾದರೂ ಈ ಅಲೌಕಿಕ ತತ್ತ್ವಗಳಿಗೆ ಚ್ಯುತಿಯಿಲ್ಲವೆಂದು ನಮ್ಮ ಶಾಸ್ತ್ರಗಳು ಹೇಳುತ್ತವೆ.

ಸ್ವಾಮಿ ವಿವೇಕಾನಂದರು ತಮ್ಮ '**ಹಿಂದೂಧರ್ಮ ಮತ್ತು ಶ್ರೀರಾಮಕೃಷ್ಣ**' ಎಂಬ ಲೇಖನದಲ್ಲಿ ಹೀಗೆ ಹೇಳುತ್ತಾರೆ:

''ಸತ್ಯ''ದಲ್ಲಿ ಎರಡು ವಿಧಗಳಿವೆ. ಒಂದನೆಯದು ಮಾನವನ ಸಾಧಾರಣ ಇಂದ್ರಿಯಗಳಿಗೆ ಗ್ರಾಹ್ಯವಾದುದು ಮತ್ತು ಇಂದ್ರಿಯ ಜ್ಞಾನವನ್ನು ಆಧರಿಸಿದ ತರ್ಕವನ್ನು ಅವಲಂಬಿಸಿದುದು. ಎರಡನೆಯದು ಸೂಕ್ಷ್ಮವಾದ ಯೋಗಶಕ್ತಿಯಿಂದ ಗ್ರಾಹ್ಯವಾದುದು. ಒಂದನೆಯದರ ಸಹಾಯದಿಂದ ಸಂಗ್ರಹಿಸಲಾದ ಜ್ಞಾನವನ್ನು 'ವಿಜ್ಞಾನ' ಎಂದು ಕರೆಯುತ್ತೇವೆ. ಎರಡನೆಯದರ ಸಹಾಯದಿಂದ ವೇದ್ಯವಾದ ಜ್ಞಾನವನ್ನು 'ವೇದಗಳು' ಎಂದು ಕರೆಯುತ್ತೇವೆ. ವೇದಗಳೆಂದು ಕರೆಯಲ್ಪಡುವ, ಅನಾದಿಯೂ ಅನಂತವೂ ಆದ ಇಂದ್ರಿಯಾತೀತ ಸತ್ಯಗಳು ಅನವರತವೂ ಅಸ್ತಿತ್ವದಲ್ಲಿವೆ. ಈ ಸತ್ಯಗಳ ಸಹಾಯ

ದಿಂದಲೇ ಸೃಷ್ಟಿಕರ್ತನು ಜಗತ್ತಿನ ಸೃಷ್ಟಿ, ಸ್ಥಿತಿ, ಪ್ರಳಯ ಕಾರ್ಯಗಳನ್ನು ನಡೆಸುತ್ತಿದ್ದಾನೆ. ಈ ಅತೀಂದ್ರಿಯ ಶಕ್ತಿ ಯಾವ ವ್ಯಕ್ತಿಯಲ್ಲಿ ಅಭಿವ್ಯಕ್ತವಾಗುವುದೋ ಅವನಿಗೆ 'ಋಷಿ' ಎಂದು ಹೆಸರು; ಮತ್ತು ಈ ಶಕ್ತಿಯ ಸಹಾಯದಿಂದ ಯಾವ ಅಲೌಕಿಕ ಸತ್ಯಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವನೋ ಆ ಸತ್ಯಗಳಿಗೆ 'ವೇದಗಳು' ಎಂದು ಹೆಸರು.

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೫, ಪು.೩೮೩)*

ಏನು ಈ ಅಲೌಕಿಕ ಆಧ್ಯಾತ್ಮಿಕ ತತ್ತ್ವಗಳು? ಆತ್ಮತತ್ತ್ವ, ಅದರ ಸ್ವರೂಪ, ಜೀವ ಹಾಗೂ ಬ್ರಹ್ಮನ ಸಂಬಂಧ, ಧರ್ಮನಿಯಮ, ಅವಿದ್ಯೆ ಹಾಗೂ ಅದರ ಕಾರ್ಯ, ಮುಕ್ತಿ ಹಾಗೂ ಅದರ ಮಾರ್ಗ, ಭಗವತ್ಕೃಪೆ, ಜಗತ್ತಿನ ಸೃಷ್ಟಿಯ ಹಿಂದಿರುವ ಶಕ್ತಿ, ಜೀವಜಗತ್ತುಗಳ ಸ್ವಭಾವ ಹಾಗೂ ಗುರಿ — ಈ ಎಲ್ಲ ವಿಚಾರಗಳನ್ನು ಕುರಿತ ಅನೇಕ ತತ್ತ್ವಗಳು ವೇದಗಳಲ್ಲಿವೆ. ವೇದಗಳ ಕೊನೆಯ ಭಾಗವಾದ ಉಪನಿಷತ್ತುಗಳು (ಪ್ರಧಾನವಾಗಿ ೧೦ ಉಪನಿಷತ್ತುಗಳು), ಬ್ರಹ್ಮಸೂತ್ರ ಹಾಗೂ ಭಗವದ್ಗೀತೆ – ಇವು ಮೂರು ಸೇರಿ ನಿರೂಪಿಸುವ 'ವೇದಾಂತ' ತತ್ತ್ವವು ಪ್ರಧಾನವಾಗಿ ಪ್ರತಿಪಾದಿಸುವುದು ಈ ಶಾಶ್ವತ ತತ್ತ್ವಗಳನ್ನೇ. ಇಲ್ಲಿ ಬೆಳೆದು ಬಂದಿರುವ ಸಾಹಿತ್ಯದ ವ್ಯಾಪಕತೆ ಅತ್ಯಂತ ವಿಶಾಲವಾದುದು. 'ಈ ಶಾಶ್ವತ ತತ್ತ್ವಗಳು ಮಾತ್ರವೇ ಏಕೆ ಬದಲಾಗದೆ ಉಳಿಯುವುವು? ಇವುಗಳೇ ಸತ್ಯವೆಂದು ಏಕೆ ನಂಬಬೇಕು?' – ಮೊದಲಾದ ಎಲ್ಲ ಸಂದೇಹ, ತರ್ಕ, ವಾದಗಳಿಗೆ ಅಲ್ಲಿ ವಿಸ್ತಾರವಾದ ವಿವರಣೆಯಿದೆ. ಸಾಮಾನ್ಯರಿಂದ ಹಿಡಿದು ಅತ್ಯಂತ ತೀಕ್ಷ್ಣಮತಿಯ ವಿದ್ವಾಂಸರವರೆಗೆ ಯಾರಿಗಾದರೂ ಮೂಡಬಹುದಾದ ಬಗೆಬಗೆಯ ಪ್ರಶ್ನೆಗಳಿಗೆ ಅಲ್ಲಿ ಉತ್ತರ ನೀಡುವ ಪ್ರಯತ್ನ ಮಾಡಲಾಗಿದೆ. ಕಾರಣ, ಇವು ಕೇವಲ ಒಂದು ವರ್ಷದಲ್ಲೋ ಕೆಲವು ದಶಕಗಳಲ್ಲೋ ನಿರೂಪಿತವಾದ ತತ್ತ್ವಗಳಲ್ಲ; ಸಹಸ್ರಾರು ವರ್ಷಗಳಿಂದ ಬೆಳೆದು ಬಂದಿದೆ ವೇದಾಂತ ಸಾಹಿತ್ಯ. ಮೇಲೆ ಹೇಳಿದ ಉಪನಿಷತ್, ಬ್ರಹ್ಮಸೂತ್ರ, ಗೀತೆಗಳಲ್ಲದೆ ಅವುಗಳಿಗೆ ಶಂಕರಾಚಾರ್ಯರೇ ಮೊದಲಾದವರು ಬರೆದ ವಿಸ್ತಾರವಾದ 'ಭಾಷ್ಯ'ಗಳು, ಅವುಗಳಿಗೆ ಪ್ರಕಾಂಡ ಪಂಡಿತರಿಂದ ರಚಿತವಾದ 'ಟೀಕೆ'ಗಳು, ಹೆಚ್ಚು ತರ್ಕ–ಚರ್ಚೆಗಳಿಂದ ಕೂಡಿದ 'ವಾರ್ತಿಕ' ಹಾಗೂ 'ವಿವರಣೆ'ಗಳು, ಇವಲ್ಲದೆ ಅನೇಕರಿಗೆ ಸುಲಭಗ್ರಾಹ್ಯವಾದ 'ಪ್ರಕರಣ' ಗ್ರಂಥಗಳು, ಇನ್ನು ಸರಳವಾಗಿ ಎಲ್ಲರಿಗೂ ಅರ್ಥವಾಗುವಂತೆ ಇತ್ತೀಚಿನ ಕಾಲದಲ್ಲಿ ಪ್ರಾದೇಶಿಕ ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ರಚಿತವಾದ ವಿವರಣಾತ್ಮಕ ಗ್ರಂಥಗಳು — ಇವೆಲ್ಲವನ್ನೂ **'ವೇದಾಂತ ಸಾಹಿತ್ಯ'**ವೆನ್ನಬೇಕು. ಇವೆಲ್ಲ ಶಾಶ್ವತ ಸತ್ಯದ, ಸನಾತನ ತತ್ತ್ವಗಳ ಕಡೆಗೇ ಸದಾ ಬೊಟ್ಟುಮಾಡುತ್ತಿವೆ ಎಂಬುದು ಬಹಳ ಮುಖ್ಯ.

## ಆಧ್ಯಾತ್ಮಿಕ ಅನುಭವಗಳ ಪ್ರಮಾಣ

ಈ ಅಲೌಕಿಕ ತತ್ತ್ವಗಳಿಗೆ ಅಂತಿಮ ಪ್ರಮಾಣವೇ ವೇದಗಳು. 'ಇವೇಕೆ ಸತ್ಯ? ದೇವರು ಎಲ್ಲವನ್ನೂ ನಿಯಂತ್ರಿಸುತ್ತಾನೆ ಎನ್ನುತ್ತೀಯಾ?' ಎಂದು ಯಾರಾದರೂ ಕೇಳಿದರೆ, 'ಹಾಗೆಂದು ವೇದಗಳಲ್ಲಿ ಹೇಳಿದೆ. ಆದ್ದರಿಂದ ಅದು ಸತ್ಯ' ಎನ್ನುತ್ತೇವೆ. ಭೌತಿಕ ವಿಜ್ಞಾನಿಗಳು ಈ ಬಗೆಯ ವಾದವನ್ನು ಒಪ್ಪುವುದಿಲ್ಲ, ಏಕೆಂದರೆ ಅವರಿಗೆ ಇಂದ್ರಿಯಗಳಿಗೆ ನಿಲುಕುವ ಸಂಗತಿಗಳು ಮಾತ್ರ ಸತ್ಯ. ಆದರೆ, ಇಂದ್ರಿಯ ಜಗತ್ತನ್ನು ಮೀರಿದ ಸತ್ಯಗಳನ್ನು ಇಂದ್ರಿಯಗಳ ಹಾಗೂ ಅದನ್ನು ಆಧರಿಸಿದ ತರ್ಕ ಹೇಗೆ ಅಳೆಯುವುದು? ಈ ಕಾರಣಕ್ಕಾಗಿ ಭಾರತೀಯ ತತ್ತ್ವಗಳು ಆಧುನಿಕ ವಿಜ್ಞಾನದ ರೀತಿಯನ್ನು ಒಪ್ಪಲಾರದು. 'ಅವರು ಹೇಳುವ ನಿಯಮಗಳು ಭೌತಿಕ ಪ್ರಪಂಚದ ಮಟ್ಟಿಗೆ ಸರಿ. ಅದನ್ನು ಮೀರಿದ ತತ್ತ್ವಗಳನ್ನು ಅರಿಯಲು ನಮಗೆ ಶ್ರುತಿಪ್ರಮಾಣವಲ್ಲದೆ ಬೇರೆ ದಾರಿಯಿಲ್ಲ' ಎನ್ನುತ್ತವೆ ಇಲ್ಲಿನ ದರ್ಶನಗಳು. 'ಶ್ರುತಿ' ಎಂದರೆ ಕೇಳಿದ್ದು ಎಂದರ್ಥ. ಯಾರು ಅಲೌಕಿಕ ಅನುಭವವನ್ನು ಪಡೆದರೋ ಅವರಿಂದ **ಕೇಳಿದ** ತತ್ತ್ವಗಳು ಎಲ್ಲದಕ್ಕಿಂತ ಹೆಚ್ಚಿನ ಸತ್ಯ, ಅದೇ ಪರಮ ಪ್ರಮಾಣ. ಪ್ರಾಚೀನ ಋಷಿಮುನಿಗಳು ಆಳವಾದ ಧ್ಯಾನ, ತಪಸ್ಸುಗಳಿಂದ ಕಂಡುಕೊಂಡ ಸತ್ಯಗಳನ್ನು ಭಾಷೆಯ ಮೂಲಕ ಹಿಡಿದಿಟ್ಟರು. ಅವೇ ವೇದಮಂತ್ರಗಳು. ಅಂತೆಯೇ, ಯಾರು ಆತ್ಮಸಾಕ್ಷಾತ್ಕಾರ ಪಡೆದರೋ ಅವರು ತಮ್ಮ ಅನುಭವದ ಹಿನ್ನೆಲೆಯಲ್ಲಿ ನುಡಿದ ಮಾತುಗಳೂ ವೇದಗಳೇ. ಅವರಿಂದ **ಕೇಳಿದ** ಮಾತುಗಳೂ ವೇದಕ್ಕೆ ಸಮಾನ. ಇಲ್ಲಿ ಅಲೌಕಿಕ ಸತ್ಯಗಳನ್ನು ಕಂಡುಕೊಳ್ಳಲು ಅಂತಿಮವಾಗಿ ಅನುಭವವೇ ಪ್ರಮಾಣ ಎಂಬುದು ಬಹಳ ಮುಖ್ಯವಾದ ಸಂಗತಿ. ಸ್ವತಃ ದೇವರನ್ನು ಕಂಡಲ್ಲದೆ ದೇವರಿದ್ದಾನೆ ಎನ್ನಲಾಗದು ಎಂಬ ಶ್ರೀರಾಮಕೃಷ್ಣ, ವಿವೇಕಾನಂದರ ಮಾತುಗಳು ಈ ಅರ್ಥದಲ್ಲಿ ಅತ್ಯಂತ ಪ್ರಸ್ತುತವಾಗುತ್ತವೆ. ತತ್ತ್ವದ ದೃಷ್ಟಿಯಿಂದ ಈ ವಿಚಾರ ಹಳೆಯದರಲ್ಲಿ ಹಳೆಯದು, ಅತಿ ಪ್ರಾಚೀನವಾದ ವೇದಗಳ ಸಾರವೇ ಆಗಿದೆ. ಅದೇ ರೀತಿ, ಸ್ವತಃ ಕಂಡಾಗ ಮಾತ್ರ ಎಲ್ಲವನ್ನೂ ನಂಬುವ 'ಆಧುನಿಕ' ಕ್ರಮದಲ್ಲೂ ಅತ್ಯಂತ ಆಧುನಿಕ; ಎಲ್ಲ ಕಾಲದಲ್ಲೂ ಹೊಸತು, ನಿತ್ಯನೂತನ. ಈ ಕಾರಣಕ್ಕಾಗಿಯೇ ಶ್ರೀರಾಮಕೃಷ್ಣರ ಜೀವನ, ಉಪದೇಶಗಳು ಇಂದಿಗೂ ಹೊಸದೆನಿಸುತ್ತವೆ, ಜೀವಂತವೆನಿಸುತ್ತವೆ. ಅವರ ತತ್ತ್ವಗಳನ್ನು ಜಗತ್ತಿಗೆ ಸಾರಿದ ಸ್ವಾಮೀಜಿಯವರ ಪ್ರಚಂಡ ಪ್ರಭಾವದಲ್ಲಿ ಹಾಗೂ ಅವರ ಜೀವನ, ಕೃತಿಗಳ ಬೆಳಕಿನಲ್ಲಿ ಈ ಆಧುನಿಕ ಜಗತ್ತು ಎಂದೆಂದಿಗೂ ಅಳಿವಿಲ್ಲದ ಸನಾತನ ತತ್ತ್ವಗಳನ್ನು ಅರಿತುಕೊಳ್ಳಬೇಕಾಗಿದೆ.



### ಫೆಬ್ರವರಿ ತಿಂಗಳ ಕಾರ್ಯಕ್ರಮಗಳು

| | | |
|---|---|---|
| ೧೧ | ಭಾನುವಾರ | ಏಕಾದಶಿ |
| ೧೩ | ಮಂಗಳವಾರ | ಮಹಾಶಿವರಾತ್ರಿ |
| ೧೭ | ಶನಿವಾರ | ಶ್ರೀರಾಮಕೃಷ್ಣ ಜಯಂತಿ |
| ೨೬ | ಸೋಮವಾರ | ಏಕಾದಶಿ |

# ಮನಸ್ಸು ಮತ್ತು ಸಾಧನೆ



❋ ಚಿತ್ತಶುದ್ಧಿ ಆಗುವವರೆಗೂ ಭಗವಂತನ ದರ್ಶನ ದೊರೆಯುವ ಹಾಗಿಲ್ಲ. ಕಾಮ, ಕ್ರೋಧ, ಲೋಭ ಇವನ್ನೆಲ್ಲ ಜಯಿಸಿದರೆ ಮಾತ್ರ ಆತನ ಕೃಪೆ ಒದಗುತ್ತದೆ; ಆತನ ದರ್ಶನ ದೊರೆಯುತ್ತದೆ.

❋ ಎಲ್ಲಾ ಮನಸ್ಸಿನ ಮೇಲೆ ನಿಂತಿದೆ. ಮನಸ್ಸೇ ಬಂಧನಕ್ಕೆ ಕಾರಣ, ಮನಸ್ಸೇ ಮುಕ್ತಿಗೆ ಕಾರಣ. ಮನಸ್ಸಿಗೆ ಯಾವ ಬಣ್ಣ ಕೊಟ್ಟರೆ ಅದು ಆ ಬಣ್ಣ ಧರಿಸುತ್ತದೆ. ಉದಾಹರಣೆಗೆ ಅಗಸನ ಮನೆ ಯಿಂದ ತಂದ ಬಟ್ಟೆ. ಕೆಂಪು ಬಣ್ಣದಲ್ಲಿ ಅದ್ದಿದರೆ ಕೆಂಪು, ನೀಲಿ ಬಣ್ಣದಲ್ಲಿ ಅದ್ದಿದ್ದರೆ ನೀಲಿ, ಹಳದಿ ಬಣ್ಣದಲ್ಲಿ ಅದ್ದಿದರೆ ಹಳದಿ, ಮತ್ತಾವ ಬಣ್ಣದಲ್ಲಿ ಅದ್ದಿದ್ದರೂ ಆ ಬಣ್ಣ ಧರಿಸುತ್ತದೆ. ನೋಡಿಲ್ಲವೆ, ಒಂದಿಷ್ಟು ಇಂಗ್ಲಿಷ್ ಓದುವು ದಕ್ಕೆ ಕಲಿತುಕೊಂಡಿರಿ ಎಂದರೆ, ನಿಮ್ಮನ್ನು ಹೇಳದೆ ಕೇಳದೆ 'ಕೋಸ್‌ಪಿಸ್' ಎಂಬ ಇಂಗ್ಲಿಷ್ ಪದಗಳು ನಿಮ್ಮ ಬಾಯಿಂದ ಹೊರ ಬೀಳುವುದನ್ನ? (ಎಲ್ಲರೂ ನಗುತ್ತಾರೆ.) ಬಳಿಕ ಕಾಲಿಗೆ ಬೂಟ್ಸು, ಸಿಳ್ಳು ಹಾಕುತ್ತಾ ಆಲಾಪನೆ ಮಾಡುವುದು ಇವೆಲ್ಲಾ ಬಂದುಬಿಡುತ್ತವೆ. ಇವೆಲ್ಲಾ ಒಂದೇ ಜೊತೆ. ವಿದ್ಯಾವಂತ ಸಂಸ್ಕೃತ ಕಲಿತುಕೊಂಡಿದ್ದೇ ಆದರೆ ಪದೇ ಪದೇ ಸಂಸ್ಕೃತ ಶ್ಲೋಕಗಳನ್ನು ಎತ್ತಿ ಹೇಳುತ್ತಲೇ ಇರುತ್ತಾನೆ. ನೀನು ಕೆಟ್ಟವರೊಡನೆ ಬೆಳೆದರೆ, ನಿನ್ನ ನಡೆನುಡಿ ವ್ಯವಹಾರ ಎಲ್ಲವೂ ಅವರಂತೆ ಆಗಿಬಿಡುತ್ತವೆ; ಭಕ್ತರ ಸಹವಾಸದಲ್ಲಿ ಬೆಳೆದರೆ, ಮನಸ್ಸು ಭಗವಚ್ಚಿಂತನೆ, ಭಗವತ್ಕಥೆ ಇವುಗಳಲ್ಲೇ ನಿರತವಾಗಿರುತ್ತದೆ.

❋ ಮನಸ್ಸೇ ಎಲ್ಲಕ್ಕೂ ಕಾರಣ. ಮನುಷ್ಯನ ಒಂದು ಪಕ್ಕದಲ್ಲಿ ಹೆಂಡತಿ, ಇನ್ನೊಂದು ಪಕ್ಕದಲ್ಲಿ ಮಗಳು. ಒಬ್ಬಳಿಗೆ ಒಂದು ವಿಧದಲ್ಲಿ ಇನ್ನೊಬ್ಬಳಿಗೆ ಇನ್ನೊಂದು ವಿಧದಲ್ಲಿ ಪ್ರೀತಿ ತೋರಿಸು ತ್ತಾನೆ. ಆದರೆ ಮನಸ್ಸು ಮಾತ್ರ ಒಂದೇ ಒಂದು.

❋ ಮನಸ್ಸಿನಿಂದಲೇ ಬಂಧನ, ಮನಸ್ಸಿನಿಂದಲೇ ಮುಕ್ತಿ. 'ನಾನು ಮುಕ್ತಪುರುಷ. ಸಂಸಾರದಲ್ಲಿ ಇದ್ದರೆ ತಾನೆ ಏನು, ಅರಣ್ಯದಲ್ಲಿ ಇದ್ದರೆ ತಾನೆ ಏನು, ನನಗೆಲ್ಲಿಯದು ಬಂಧನ ? ನಾನು ಭಗವಂತನ ಮಗು; ರಾಜಾಧಿರಾಜನ ಮಗು. ನನಗಾವು ದರ ಬಂಧನ ?' ಎಂಬುದಾಗಿ ಯಾರು ಸತತ ಚಿಂತಿಸುತ್ತಾನೊ, ಆತ ಮುಕ್ತನಾಗಿಬಿಡುತ್ತಾನೆ. ಒಂದು ಪಕ್ಷ ಹಾವೇನಾದರೂ ಕಡಿ ದರೆ 'ನನ್ನನ್ನು ವಿಷ ಏನೂ ಮಾಡಲಾರದು' ಎಂಬುದಾಗಿ ದೃಢ ವಾಗಿ ನಂಬಿದರೆ ಆಗ ಅದರಿಂದ ಪಾರಾಗಿಬಿಡಬಹುದು. ಹಾಗೆ 'ನಾನು ಬದ್ಧನಲ್ಲ, ಮುಕ್ತ' ಎಂಬುದಾಗಿ ದೃಢವಾಗಿ ನಂಬಿದರೆ ಹಾಗೇ ಆಗಿಬಿಡಬಹುದು – ಮುಕ್ತನೇ ಆಗಿಬಿಡಬಹುದು.

❋ ಭಗವಂತನ ನಾಮ ಜಪಿಸಿದರೆ ಮನುಷ್ಯನ ದೇಹ ಮತ್ತು ಮನಸ್ಸು ಎಲ್ಲವೂ ಶುದ್ಧವಾಗಿಬಿಡುತ್ತದೆ. ಕೇವಲ ಪಾಪ, ನರಕ ಈ ಮಾತುಗಳಲ್ಲೇ ಏಕೆ ತೊಡಗಬೇಕು? ಭಗವಂತ ನಿಗೆ ಒಮ್ಮೆ ಹೇಳಿಬಿಡು: 'ಹೇ ಭಗವಂತ, ಇದುವರೆಗೆ ಅನ್ಯಾಯ ಕರ್ಮಗಳನ್ನು ಮಾಡಿ ದ್ದೇನೆ, ಇನ್ನು ಮುಂದೆ ಮಾಡುವುದಿಲ್ಲ.' ಆತನ ಹೆಸರಿನಲ್ಲಿ ಶ್ರದ್ಧೆ ಯಿಡು.

❋ ವಿವೇಕ ವೈರಾಗ್ಯಗಳನ್ನು ಗಳಿಸಿಕೊಂಡು ಬೇಕಾದರೆ ಸಂಸಾರದಲ್ಲಿ ಇರಬಹುದು. ಸಂಸಾರ ಸಮುದ್ರದಲ್ಲಿ ಕಾಮಕ್ರೋಧಾದಿ ಮೊಸಳೆ ವಾಸವಾಗಿವೆ. ಅರಸಿನ ಮೈಗೆ ಹಚ್ಚಿಕೊಂಡು ನೀರಿಗೆ ಇಳಿದರೆ ಮೊಸಳೆಗಳ ಕಾಟ ಇರುವು ದಿಲ್ಲ. ವಿವೇಕ ವೈರಾಗ್ಯವೇ ಅರಸಿನ. ಸದಸದ್ವಿಚಾರಕ್ಕೆ ವಿವೇಕ ಅಂತ ಹೆಸರು. ಭಗವಂತನೇ ಸತ್, ನಿತ್ಯವಸ್ತು; ಉಳಿದುದೆಲ್ಲಾ ಅಸತ್, ಅನಿತ್ಯವಸ್ತು, ಎರಡು ದಿನದ ಬಾಳಿನವು – ಎಂಬುದೇ ಜ್ಞಾನ. ಭಗವಂತನಲ್ಲಿ ಅನುರಾಗ ಬೆಳಸಿಕೊಳ್ಳಬೇಕು. ಆತನ ಕಡೆ ಮನಸ್ಸು ಹರಿಯುವಂತೆ ಮಾಡಿಕೊಳ್ಳಬೇಕು, ಆತನನ್ನು ಪ್ರೀತಿಸ ಬೇಕು.

❋ ರಾಗಾಭಕ್ತಿ ಉಂಟಾಗದ ಹೊರತು ಭಗವಂತನ ಸಾಕ್ಷಾ ತ್ಕಾರ ದೊರೆಯುವುದಿಲ್ಲ. ಆತನ ಮೇಲೆ ಪ್ರೀತಿ ಉಂಟಾಗಬೇಕು. ಸಾಂಸಾರಿಕ ಬುದ್ಧಿ ಸಂಪೂರ್ಣವಾಗಿ ತೊಲಗಿಹೋಗಿ ನೂರಕ್ಕೆ ನೂರು ಭಾಗ ಮನಸ್ಸು ಆತನಲ್ಲಿ ನೆಲೆಸಬೇಕು. ಆಗ ಮಾತ್ರವೇ ಆತನ ಸಾಕ್ಷಾತ್ಕಾರ ದೊರೆಯುತ್ತದೆ.

❋ ಚಿತ್ತಶುದ್ಧಿ ಆಗದೆ ಇತ್ತು ಎಂದರೆ, ಭಗವಂತನ ದರ್ಶನ ವನ್ನು ಪಡೆಯಲಾಗುವುದಿಲ್ಲ. ಕಾಮಕಾಂಚನಾಸಕ್ತಿಯಿಂದ ಮನಸ್ಸು ಮಲಿನವಾಗಿಬಿಟ್ಟಿದೆ — ಕೊಳೆಯಿಂದ ತುಂಬಿದೆ. ಸೂಜಿಯು ಮಣ್ಣಿನಿಂದ ಆವೃತವಾಗಿದ್ದರೆ ಆಗ ಸೂಜಿಕಲ್ಲು ಅದನ್ನು ಎಳೆಯಲಾರದು. ಆ ಮಣ್ಣನ್ನು ತೊಳೆದುಬಿಟ್ಟಿದ್ದೇ ಆದರೆ ಒಡನೆ ಸೂಜಿಕಲ್ಲು ಅದನ್ನು ಎಳೆದುಬಿಡುತ್ತದೆ. ಅದೇ ರೀತಿ ಮನಸ್ಸಿನ ಕೊಳಕನ್ನು ಕಣ್ಣೀರಿನಿಂದ ತೊಳೆದುಬಿಡಬಹುದು. ಯಾರೇ ಆಗಲಿ, 'ಹೇ ಭಗವಂತ, ಮತ್ತೆ ನಾನು ಅಂಥ ಕಾರ್ಯ ಗಳನ್ನು ಮಾಡುವುದಿಲ್ಲ' ಅಂತ ಹೇಳಿ ಅನುತಾಪದಿಂದ ಅತ್ತುದೇ ಆದರೆ, ಕೊಳೆ ತೊಳೆದುಹೋಗುತ್ತದೆ. ಆಗ ಭಗವದ್ರೂಪದ ಸೂಜಿಗಲ್ಲು ಮನಸ್ಸೆಂಬ ಸೂಜಿಯನ್ನು ಎಳೆದುಕೊಂಡು ಬಿಡು ತ್ತದೆ. ಆಗ ಸಮಾಧಿಯುಂಟಾಗುತ್ತದೆ. ಭಗವಂತನ ದರ್ಶನ ದೊರೆಯುತ್ತದೆ.

ಶ್ರೀರಾಮಕೃಷ್ಣ ವಚನವೇದದಿಂದ

# ಶಾಸ್ತ್ರದೃಷ್ಟಿಯಲ್ಲಿ ಸ್ವಾಮಿ ವಿವೇಕಾನಂದರನ್ನು ಕುರಿತ ಶ್ರೀರಾಮಕೃಷ್ಣರ ನುಡಿಗಳ ತಾತ್ಪರ್ಯ

ಬಂಗಾಳಿ ಮೂಲ: **ಸ್ವಾಮಿ ವಿಶ್ವರೂಪಾನಂದ** ಅನುವಾದ: **ಕುಮಾರಿ ಪಿ.ಉಷಾ**

ಶ್ರೀರಾಮಕೃಷ್ಣರು ಸ್ವಾಮಿ ವಿವೇಕಾನಂದರನ್ನು ಸಪ್ತರ್ಷಿ ಮಂಡಲದಿಂದ ಈ ಜಗತ್ತಿಗೆ ಕರೆತಂದ ವಿಚಾರವನ್ನೂ ಎಲ್ಲರೂ ಕೇಳಿ ಬಲ್ಲರು. ಆದರೆ ಈ ಕುರಿತು ಶಾಸ್ತ್ರಗಳ ಹಿನ್ನೆಲೆಯಲ್ಲಿ ಯಾವ ಅರ್ಥಗಳನ್ನು ಕಂಡುಕೊಳ್ಳಬಹುದು ಎಂಬ ವಿಶ್ಲೇಷಣಾತ್ಮಕವಾದ ಅನ್ವೇಷಣೆ ಇಲ್ಲಿದೆ. ರಾಮಕೃಷ್ಣ ಮಹಾಸಂಘದ ಬಂಗಾಳಿ ಮಾಸಪತ್ರಿಕೆ **'ಉದ್ಬೋಧನ'**ದ ೧೮೬೩ರ ಸ್ವಾಮೀಜಿ ಶತಮಾನೋತ್ಸವ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಲೇಖನದ ಕನ್ನಡಾನುವಾದವಿದು. ಲೇಖಕರು ರಾಮಕೃಷ್ಣ ಮಹಾಸಂಘದ ಹಿರಿಯ ಸಂನ್ಯಾಸಿಗಳು ಹಾಗೂ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದವರು. ಅನುವಾದಕರು ಪ್ರಸ್ತುತ ವಾರಣಾಸಿ ಸೇವಾಶ್ರಮದಲ್ಲಿ ಸ್ವಯಂಸೇವಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರ ಅನೇಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

**ಯು**ಗಾಚಾರ್ಯ ಸ್ವಾಮಿ ವಿವೇಕಾನಂದರನ್ನು ವರ್ಣಿಸುವುದೆಂದರೆ ಸೂರ್ಯನ ತೇಜಸ್ಸನ್ನು ಹಣತೆ ಹಚ್ಚಿ ತಿಳಿಯಲು ಪ್ರಯತ್ನಿಸುವಂತೆ. ದೀನ ಅರ್ಚಕನು ಸರ್ವಪ್ರಕಾಶಕ ಸೂರ್ಯದೇವನ **'ದೀಪೋಽಯಂ ಪ್ರತಿಗೃಹ್ಯತಾಮ್'** ಎಂಬ ಮಂತ್ರವನ್ನು ಉಚ್ಚರಿಸುತ್ತ, ದೀಪವನ್ನು ಬೆಳಗಿ ಸಂತೋಷಪಡುತ್ತಾನೆ.

ಸ್ವಾಮಿ ವಿವೇಕಾನಂದರ ವಿಷಯವಾಗಿ ಶ್ರೀರಾಮಕೃಷ್ಣರ ನುಡಿಗಳ ಬಗ್ಗೆ ನಾನಾ ಭಿನ್ನಾಭಿಪ್ರಾಯಗಳು ಇತ್ತೀಚೆಗೆ ಕೇಳಿ ಬರುತ್ತಿವೆ.

೧) ಕೆಲವರು ಸ್ವಾಮೀಜಿ ನರಋಷಿಯ ಅವತಾರ ಎಂದರೆ, ಇನ್ನು ಕೆಲವರು, ಅವರು ನಾರಾಯಣ ಋಷಿಯ ಅವತಾರವೆಂದು ಹೇಳುತ್ತಾರೆ. ೨) ಇನ್ನೂ ಕೆಲವರು ಅವರು ಸಪ್ತರ್ಷಿ ಮಂಡಲದ ಏಳು ಋಷಿಗಳಲ್ಲೊಬ್ಬರು— ಗೌತಮ, ಭಾರದ್ವಾಜ, ವಿಶ್ವಾಮಿತ್ರ, ಜಮದಗ್ನಿ, ವಸಿಷ್ಠ, ಕಶ್ಯಪ ಹಾಗೂ ಅತ್ರಿ *(ಬೃಹದಾರಣ್ಯಕೋಪನಿಷತ್, ೨.೨.೪)*— ಇವರುಗಳಲ್ಲಿ ಒಬ್ಬರು ಎಂದು ತಿಳಿಯುತ್ತಾರೆ. ಏನೇ ಇರಲಿ, ನರ ಅಥವ ನಾರಾಯಣ ಋಷಿಯ ಹೆಸರು ಸಪ್ತರ್ಷಿಗಳ ನಡುವೆ ಕಂಡು ಬರುವುದಿಲ್ಲವಾದ್ದರಿಂದ ಈ ಬಗ್ಗೆ ಶ್ರೀರಾಮಕೃಷ್ಣರ ವಿಚಾರವೇನೆಂದು ಸ್ಪಷ್ಟವಾಗಿ ಹೇಳಲಾಗುವುದಿಲ್ಲ. ಮಾತ್ರವಲ್ಲ, ಇವೆರಡೂ ಅಭಿಪ್ರಾಯಗಳು ಪರಸ್ಪರ ವಿರೋಧವಾಗಿ ಕಂಡುಬರುತ್ತವೆ. ೩) ಕೆಲವರ ಅಭಿಪ್ರಾಯ ಹೀಗೂ ಇದೆ: ''ದಿವ್ಯಜ್ಯೋತಿಯು ಘನೀಕರಿಸಿದ 'ಅಖಂಡ'ದ ಜಗತ್ತಿನಲ್ಲಿ ಸಮಾಧಿಸ್ಥರಾಗಿದ್ದ ಏಳು ಋಷಿಗಳಲ್ಲಿ ಸ್ವಾಮೀಜಿ ಒಬ್ಬರು'' *(ಶ್ರೀರಾಮಕೃಷ್ಣ ಲೀಲಾಪ್ರಸಂಗ, ಭಾಗ ೨, ಪು.೨೮೧– ೮೨)* ಎಂದು ಶ್ರೀರಾಮಕೃಷ್ಣರೇ ಹೇಳುತ್ತಾರೆ; ಮತ್ತೊಂದೆಡೆ ಹೀಗೆ ಹೇಳುತ್ತಾರೆ: ''ಅದೇ ಅಖಂಡದ - ಭುವನದ ನಾಲ್ಕು ಜನರಲ್ಲಿ ಅವರೊಬ್ಬರು, ಸಪ್ತರ್ಷಿಗಳಲ್ಲೊಬ್ಬರು.'' ೪) ಶ್ರೀರಾಮಕೃಷ್ಣರು ಹೇಳಿದಂತೆ ''ನರೇಂದ್ರನು ಧ್ಯಾನಸಿದ್ಧ ಮಹಾಪುರುಷನು.''



ವಿಷ್ಣುಪುರಾಣದ *(೨.೭.೯,೧೮)* ಪ್ರಕಾರ ಸಪ್ತರ್ಷಿ ಮಂಡಲವು ಸ್ವರ್ಲೋಕದಲ್ಲಿದ್ದರೆ, ಪಾತಂಜಲ ಭಾಷ್ಯದ ವಾರ್ತಿಕದಲ್ಲಿ ಅದು ಭುವರ್ಲೋಕದಲ್ಲಿ ಅಂತರ್ಗತವಾಗಿದೆ *(೩.೨೬)*. ಆದರೆ ಈ ಎರಡು ಲೋಕಗಳು ಧ್ಯಾನಸಿದ್ಧ ಋಷಿಗಳ ನಿವಾಸ ಸ್ಥಳಗಳಲ್ಲ. ಸನಂದನಾದಿ ಧ್ಯಾನಸಿದ್ಧ ಋಷಿಗಳು ತಪೋಲೋಕದ ನಿವಾಸಿ

ಗಳು *(ಪಾತಂಜಲ ಭಾಷ್ಯ ३.२೬, ವಿಷ್ಣು ಪುರಾಣ, ೨.೭.೧೩)*. 'ಬ್ರಾಹ್ಮಸ್ತ್ರಿಭೂಮಿಕಾ ಲೋಕಃ' *(३.२೬)* ಎಂದು ತಪೋಲೋಕವು ಬ್ರಹ್ಮಲೋಕದಲ್ಲಿ ಅಂತರ್ಗತವಾಗಿದೆಯೆಂದು ಪಾತಂಜಲ ಭಾಷ್ಯದಲ್ಲಿ ಹೇಳಿದೆ. ಆದರೆ ಸ್ವಾಮೀಜಿ ಬ್ರಹ್ಮಲೋಕದಿಂದ ಇಲ್ಲಿಗೆ ಆಗಮಿಸಿರುವವರೆಂದು ಶ್ರೀರಾಮಕೃಷ್ಣರು ಹೇಳುವುದಿಲ್ಲ. ಆದ್ದರಿಂದ ಈ ಅಭಿಪ್ರಾಯವೂ ತರ್ಕಬದ್ಧವಾಗಿಲ್ಲ. ಮೇಲಿನ ಎಲ್ಲ ವಿರೋಧ ಅಭಿಪ್ರಾಯಗಳ ಸಮಾಧಾನ ಹೇಗಾಗುವುದು? ಈ ಕುರಿತು ಹಾಗೂ ಶ್ರೀರಾಮಕೃಷ್ಣರ ಮಾತುಗಳ ತಾತ್ಪರ್ಯವೇನು ಎಂದು ವಿಚಾರ ಮಾಡುವ ಮುನ್ನ ಒಂದೆರಡು ವಿಷಯಗಳ ಬಗ್ಗೆ ತಿಳಿದುಕೊಳ್ಳಬೇಕಾಗುತ್ತದೆ. ಮೊದಲು ಅವುಗಳನ್ನು ನೋಡೋಣ.

### ಆಧಿಕಾರಿಕ ಪುರುಷ ಎಂದರೆ ಯಾರು?

ಲೋಕಶಿಕ್ಷಣಕ್ಕಾಗಿ ಬರುವ ಮಹಾಮಾನವರನ್ನು ಶಾಸ್ತ್ರಗಳು ಎರಡು ಪ್ರಕಾರವಾಗಿ – ಪಾತಂಜಲದಲ್ಲಿ ಪ್ರಕೃತಿಲೀನ ಪುರುಷ ಎಂದೂ, ವೇದಾಂತವು ಆಧಿಕಾರಿಕ ಪುರುಷ ಎಂದೂ ವರ್ಣಿಸುತ್ತವೆ. ಸಾಂಖ್ಯ ದಾರ್ಶನಿಕರ ಅಭಿಪ್ರಾಯದಲ್ಲಿ ಪ್ರಕೃತಿಲೀನ ಪುರುಷರು ಪ್ರಾಕೃತಬದ್ಧರು – ಬದ್ಧಾವಸ್ಥೆಯಲ್ಲಿರುವವರು, ಸ್ವಾತ್ಮ ವಿಷಯಕ ಜ್ಞಾನ ಇವರಿಗಿಲ್ಲ. ಆದರೆ ಆತ್ಮಾಭಿಮಾನವಶರಾಗಿ ಅಲೌಕಿಕ ಶಕ್ತಿಗೆ ಇವರು ಅಧಿಕಾರಿಗಳು (*ಐತರೇಯ ಉಪನಿಷತ್, ೪೫*). ಪಾತಂಜಲರು ಹೇಳುತ್ತಾರೆ, ''ಪ್ರಕೃತಿಲೀನಸ್ಯ ಉತ್ತರಾ ಬದ್ಧಕೋಟಿಃ'' *(ಯೋಗಸೂತ್ರ ೧.೨೪ ವ್ಯಾಸಭಾಷ್ಯ)* – ಪ್ರಕೃತಿಲೀನಾವಸ್ಥೆಯಿಂದ ವಿಚ್ಯುತರಾಗಿ ಇವರು ಮತ್ತೆ ಬಂಧನಕ್ಕೊಳಗಾಗುವರು. ''ನರೇಂದ್ರನು ನಿತ್ಯಸಿದ್ಧನು'', ''ನರೇಂದ್ರನು ಉಚ್ಚಕೋಟಿ, ನಿರಾಕಾರದಲ್ಲಿ ನೆಲೆನಿಂತವನು'' ಎಂದು ಶ್ರೀರಾಮಕೃಷ್ಣರು ಬಣ್ಣಿಸುತ್ತಾರೆ. *(ಶ್ರೀರಾಮಕೃಷ್ಣ ಲೀಲಾಪ್ರಸಂಗ, ಶ್ರೀರಾಮಕೃಷ್ಣ ವಚನವೇದ)*. ಆದ್ದರಿಂದ ಸ್ವಾಮೀಜಿ ಈ ಶ್ರೇಣಿಗೆ ಸೇರಿದವರಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು. ಸ್ವಾಮಿ ವಿವೇಕಾನಂದರು ಲೋಕಶಿಕ್ಷಣವನ್ನು ನೀಡಲು ಇಳೆಗಿಳಿದು ಬಂದ ಆಧಿಕಾರಿಕ ಪುರುಷ ಎಂಬ ವೇದಾಂತ ಸಮ್ಮತ ಅಭಿಪ್ರಾಯವನ್ನು ನಾವು ಸ್ವೀಕರಿಸಬೇಕಾಗುವುದು. ಏಕೆಂದರೆ ಶ್ರೀರಾಮಕೃಷ್ಣರು, 'ನರೇಂದ್ರನು ಲೋಕಶಿಕ್ಷಣವನ್ನು ನೀಡುವನು' ಎಂಬ ಭವಿಷ್ಯವಾಣಿಯನ್ನು ನುಡಿದಿದ್ದರು. 'ಉತ್ತರ ಮೀಮಾಂಸಾ' ದಲ್ಲಿ ಸಗುಣ ಹಾಗು ನಿರ್ಗುಣ – ಈ ಉಭಯ ರೀತಿಯ ಬ್ರಹ್ಮಜ್ಞಾನಿಗಳು ಪರಮೇಶ್ವರನ ಇಚ್ಛೆಯಿಂದಲೇ ಅಧಿಕಾರತ್ವವನ್ನು ಪಡೆಯುವರು, ಅರ್ಥಾತ್ ಲೋಕಶಿಕ್ಷಣವನ್ನು ನೀಡಲು ಅಧಿಕೃತರು ಎಂಬುದನ್ನು ಸ್ವೀಕರಿಸಲಾಗಿದೆ. ಶ್ರೀರಾಮಕೃಷ್ಣರು ಹೇಳುವಂತೆ ಇವರೇ ಅಧಿಕಾರ ಪುರುಷರು. ಇವರಲ್ಲಿ ಕ್ರಮಮುಕ್ತಿಯನ್ನು ಪಡೆದ ಸಗುಣ ಬ್ರಹ್ಮಜ್ಞಾನಿಗಳು ತಮ್ಮ ಸಾಧನಕಾಲದಲ್ಲಿ ಈಶ್ವರ ಪ್ರಾಪ್ತಿಯ ಸಲುವಾಗಿ ದಹರ ವಿದ್ಯೆಯೇ ಮೊದಲಾದ ಸಗುಣ ವಿದ್ಯೆಗಳಲ್ಲಿ ಪರಾಯಣರಾಗಿದ್ದರು. ಫಲವಾಗಿ, ಭಗವದನುಗ್ರಹದಿಂದ ಅವರು ಅಧಿಕಾರತ್ವವನ್ನು ಪಡೆದು ಕೊನೆಗೆ ಕೈವಲ್ಯವನ್ನು ಹೊಂದಿದರು.[೧] ಇದು ಉತ್ತರ ಮೀಮಾಂಸೆಯ ಸಿದ್ಧಾಂತ. ಮತ್ತೆ ನಿರ್ಗುಣ ಬ್ರಹ್ಮಜ್ಞರೂ ಪರಮೇಶ್ವರನ ಇಚ್ಛಾನುಸಾರ ಅಧಿಕಾರತ್ವವನ್ನು ಪಡೆದರು ಎಂದು **'ಬ್ರಹ್ಮ ವೇದ ಬ್ರಹ್ಮೈವ ಭವತಿ'** *(ಮುಂಡಕೋಪನಿಷತ್ತು, ३.೨.೯)*, **'ಏತತ್ ಪಶ್ಯನ್ ಋಷಿ ವಾಮದೇವಃ ಪ್ರತಿಪದೇ ಅಹಂ ಮನುಃ ಅಭವಂ ಸೂರ್ಯಶ್ಚ'** *(ಬೃ.ಹ.ಉಪ., ೧.೪.೧೦)* ಮುಂತಾದ ಶ್ರುತಿಗಳಿಂದಲೂ ಇದನ್ನು ತಿಳಿದುಕೊಳ್ಳಬಹುದು. ನಿರ್ಗುಣ ಬ್ರಹ್ಮಜ್ಞಾನವಾಗುತ್ತಿದ್ದಂತೆಯೇ ಬ್ರಹ್ಮವಿದರು ಸರ್ವಾತ್ಮಕ ಬ್ರಹ್ಮಸ್ವರೂಪಿಯಾಗಿಬಿಡುವರು. ಅವರಿಗಿನ್ನು ನಮ್ಮಂತೆ ಸ್ವತಂತ್ರ ಅಸ್ತಿತ್ವವಿರುವುದಿಲ್ಲ; ಆದರೆ ಪರಮೇಶ್ವರನಿಂದ ನಿರ್ದೇಶಿಸಲ್ಪಟ್ಟು ಇಂಥ ಪುರುಷಶ್ರೇಷ್ಠರು ಲೋಕಶಿಕ್ಷಣದ ಅಧಿಕಾರತ್ವವನ್ನು ಪಡೆಯುತ್ತಾರೆ. ಈ ನಿರ್ದೇಶವು ಸಂಪೂರ್ಣಗೊಳ್ಳುವ ತನಕ ಅವರು ಸ್ವೇಚ್ಛೆಯಿಂದ ಪುನಃ ಪುನಃ ಶರೀರಧಾರಣೆ ಮಾಡಿ ತಮ್ಮ ಕಾರ್ಯವನ್ನು ಮುಗಿಸಿ ಆ ಬಳಿಕ ಪರಮಪದದಲ್ಲಿ ಲೀನರಾಗುತ್ತಾರೆ. 'ಉತ್ತರಮೀಮಾಂಸಾ' *(३.३.೧೯)* ದಲ್ಲಿ ಈ ವಿಷಯಗಳನ್ನು ವಿಸ್ತಾರವಾಗಿ ಚರ್ಚಿಸಲಾಗಿದೆ. ಇಲ್ಲಿಯೇ ವಸಿಷ್ಠ, ಸನತ್‌ಕುಮಾರ, ಕೃಷ್ಣದ್ವೈಪಾಯನ ಮುಂತಾದ ಆಧಿಕಾರಿಕ ಪುರುಷರ ಉಲ್ಲೇಖವೂ ಇದೆ.

### ಆಧಿಕಾರಿಕ ಪುರುಷರು ವಾಸಿಸುವ ನೆಲೆ

ಇಂಥ ಆಧಿಕಾರಿಕ ಪುರುಷರು ನಮ್ಮ ನಡುವೆ ಯಾವಾಗಲೂ ಇರುವುದಿಲ್ಲ. ಅವರು ಪರಮೇಶ್ವರನ ಇಚ್ಛಾಧೀನರಾಗಿ ಕೆಲವೊಮ್ಮೆ ಮರ್ತ್ಯಲೋಕದಲ್ಲಿ ಅವತರಿಸುತ್ತಾರೆ. ನಡುವೆ ಅವರು ಬ್ರಹ್ಮಲೋಕದಲ್ಲಿ ನೆಲೆಸುವರು. ಹೇಗೆಂದರೆ, ಕ್ರಮಮುಕ್ತಿಯನ್ನು ಪಡೆದ ಸಗುಣ ಬ್ರಹ್ಮಜ್ಞಾನಿಗಳು ಬ್ರಹ್ಮಲೋಕಕ್ಕೆ ತೆರಳಿ, ಬ್ರಹ್ಮನ ಜೀವಿತಕಾಲದವರೆಗೂ ಅಲ್ಲಿದ್ದುಕೊಂಡು, ಆತನ ಅಧಿಕಾರ ಕೊನೆಗೊಂಡು ಪರಬ್ರಹ್ಮನಲ್ಲಿ ಲೀನರಾಗುವ ವೇಳೆಗೆ ಈ ಕ್ರಮಮುಕ್ತರೂ ಆಗ ಆತನೊಂದಿಗೆ ಪರಬ್ರಹ್ಮನಲ್ಲಿ ಐಕ್ಯವಾಗುವರು. **'ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ । ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಮ್ ॥'** *(ಕೂರ್ಮಪುರಾಣ, ಪೂರ್ವ ೧೨.೭೭೩)* ಮುಂತಾದ ಶಾಸ್ತ್ರವಚನಗಳಿಂದ ಇದು ತಿಳಿದುಬರುತ್ತದೆ. ಈ ಶ್ಲೋಕದಲ್ಲಿ **ಪ್ರತಿಸಂಚರೇ** ಎಂದರೆ ಮಹಾಪ್ರಳಯ. **ಕೃತಾತ್ಮಾನಃ** ಎಂದರೆ ಆತ್ಮಸಾಕ್ಷಾತ್ಕಾರವನ್ನು ಪಡೆದವರು ಎಂದರ್ಥ. ಮುಂದಿನ ಮಾತುಗಳ ಅರ್ಥ ಸ್ಪಷ್ಟವಾಗಿದೆ — **ಪ್ರವಿಶಂತಿ ಪರಂ ಪದಮ್.** 'ಉತ್ತರ ಮೀಮಾಂಸಾ'ದ ೪.३.೫ ಹಾಗೂ ೪.೪.೨೨ರ ಸೂತ್ರಭಾಷ್ಯದಲ್ಲಿ ಈ ವಿಷಯವನ್ನು ಚರ್ಚಿಸಲಾಗಿದೆ. ಇತರ ಶಾಸ್ತ್ರಗಳಲ್ಲಿಯೂ ಈ ಬಗ್ಗೆ ಪ್ರಸ್ತಾಪಿಸಲಾಗಿದೆ. **ಅಸ್ಯೈವ ಕಿಂಚಿದುಪರ್ಯಧಶ್ಚಾಂಡಕಪಾಲತಃ । ವೈಕುಂಠಭುವನಂ ರಾಜ್ಯನ್ಮುಕ್ತಾ ಯತ್ರ ವಸಂತಿ ವೈ** *(ಸ್ಕಂದ ಪುರಾಣ, ವಿಷ್ಣುಖಂಡದ ಪುರುಷೋ*

---

೧. 'ಜ್ಞಾನಾಂತರೇಷು ಚ ಐಶ್ವರ್ಯಾದಿಫಲೇಷು ಆಸಕ್ತಾಃ ಸ್ಯುಃ ಮಹರ್ಷಯಃ । ತೇ ಪಶ್ಚಾತ್ ಐಶ್ವರ್ಯಕ್ಷಯದರ್ಶನೇನ ನಿರ್ವಿಣ್ಣಾಃ ಪರಮಾತ್ಮಜ್ಞಾನೇ ಪರಿನಿಷ್ಠಾಃ ಕೈವಲ್ಯಂ ಪ್ರಾಪುಃ ಇತಿ ಉಪಪದ್ಯತೇ ।' *(ಬ್ರಹ್ಮಸೂತ್ರ ३.३.३೨, ಶಾರೀರಕಭಾಷ್ಯ)*

*ತ್ತಮ ಖಂಡ ೨೨.೩೮)* ಈ ವಾಕ್ಯ ಹಾಗೂ ಉತ್ತರ ಮೀಮಾಂಸ ಸಿದ್ಧಾಂತದ ಪ್ರಕಾರ ಕ್ರಮಮುಕ್ತ ಸಗುಣಬ್ರಹ್ಮಜ್ಞರು ನಿರ್ವಾಣ ಮುಕ್ತಿಗೆ ಮುಂಚೆ ಬ್ರಹ್ಮಲೋಕದ ಉಕ್ತ ಸ್ತರದಲ್ಲಿ ನೆಲೆಸುತ್ತ ಈ ಅವಸ್ಥೆಯನ್ನು ಪಡೆಯುವುದು ಸಾಧ್ಯ. ಹಾಗೆಯೇ ಸಗುಣ ಬ್ರಹ್ಮಜ್ಞ ಕ್ರಮಮುಕ್ತರಲ್ಲಿ ಯಾರು ಲೋಕಶಿಕ್ಷಣದ ಅಧಿಕಾರಿಗಳೋ ಅಂತಹವರು ತಮ್ಮ ಅಧಿಕಾರವು ಕ್ಷಯವಾಗುವವರೆಗೂ ಅಲ್ಲಿಯೇ ನೆಲೆಸುತ್ತಾರೆಂಬುದಕ್ಕೆ ಪ್ರಮಾಣವಿದೆ. ನಿರ್ಗುಣ ಬ್ರಹ್ಮಜ್ಞ ಆಧಿಕಾರಿಕ ಪುರುಷರೂ ಕೂಡ ಇದೇ ರೀತಿ ತಮ್ಮ ಅಧಿಕಾರತ್ವವು ಕೊನೆಗೊಳ್ಳುವವರೆಗೂ ಬ್ರಹ್ಮಲೋಕದಲ್ಲಿ ನೆಲೆಸಬೇಕು. ಏಕೆಂದರೆ '**ನ ತಸ್ಯ ಪ್ರಾಣಾಃ ಉತ್ಕ್ರಾಮಂತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ**' *(ಬೃಹ.ಉಪ., ೪.೪.೬)* ವಾಕ್ಯವೇ ಇದಕ್ಕೆ ಪುರಾವೆ. ಇಲ್ಲಿಯೇ ಬ್ರಹ್ಮನಲ್ಲಿ ಲೀನವಾದ ನಿರ್ಗುಣ ಬ್ರಹ್ಮಾತ್ಮಜ್ಞರ ಉತ್ಕ್ರಮಣ ಹಾಗು ಬ್ರಹ್ಮಲೋಕದಲ್ಲಿ ಗತಿ ಸಂಭವಿಸದಿದ್ದರೂ ಈಶ್ವರೇಚ್ಛೆಯಿಂದ ಲಭಿಸಿದ ಅಧಿಕಾರವನ್ನೂ ಅವರ ಸ್ವಾತಂತ್ರ್ಯವನ್ನೂ ಸ್ವೀಕರಿಸಿದಂತೆಯೇ '**ಮುಕ್ತಾ ಯತ್ರ ವಸಂತಿ ಹಿ**' ಮುಂತಾದ ಶಾಸ್ತ್ರವಚನಗಳನ್ನೂ ಹಾಗೂ ಇಹಲೋಕ ಆಗಮನವನ್ನೂ ಸ್ವೀಕರಿಸಬೇಕು. ಏಕೆಂದರೆ 'ಅನ್ಯತ್ರ ಸ್ಥಿತಿವ್ಯತಿರೇಕವಿರುವುದರಿಂದ ಇಹಲೋಕ ಆಗಮನವು ಉಪಪನ್ನವಾಗುವುದಿಲ್ಲ' ಎಂದಿರುವುದರಿಂದ ಅರ್ಥಾಪತ್ತಿಯುಂಟಾಗಿ, ಬ್ರಹ್ಮಲೋಕವೇ ಅವರ ವಾಸಸ್ಥಳ ಎಂದು ಅರ್ಥೈಸಬೇಕಾಗುತ್ತದೆ. ಇದಕ್ಕೆ ಮತ್ತೊಂದು ಪ್ರಮಾಣವೆಂದರೆ ಯೋಗಿಗಳ ಯೋಗದಿಂದ ಲಭಿಸಿದ ಪ್ರತ್ಯಕ್ಷಪ್ರಮಾಣ. ಬ್ರಹ್ಮಲೋಕದಲ್ಲಿ ಯೋಗಪುರುಷರು ಧ್ಯಾನಮಗ್ನರಾಗಿರುವುದರ ವರ್ಣನೆಯನ್ನು ಪಾತಂಜಲ ಯೋಗದರ್ಶನದಲ್ಲಿ ಕಾಣಬಹುದು.[೨] ಬ್ರಹ್ಮಲೋಕಕ್ಕೆ ಗಮಿಸಿರುವ ಅವರು ಸಗುಣ ಹಾಗೂ ನಿರ್ಗುಣ ಬ್ರಹ್ಮಜ್ಞರೆಂದು ಅವಶ್ಯವಾಗಿಯೂ ತಿಳಿಯಬೇಕು. ಆದರೆ '**ಸಾಧನಾಧಿಕ್ಯೇ ಫಲಾಧಿಕ್ಯ**' ಎಂಬ ಯುಕ್ತಿಯನ್ನು ಅನ್ವಯಿಸಿದರೆ ಕ್ರಮಮುಕ್ತ ಸಗುಣ ಬ್ರಹ್ಮಜ್ಞರಿಂದ ಹಿಡಿದು ನಿರ್ಗುಣ ಬ್ರಹ್ಮಜ್ಞ ಆಧಿಕಾರಿಕ ಪುರುಷರು ನಾನಾ ಸ್ತರಗಳಾಗಿ ವಿಭಜನೆಗೊಂಡ ಬ್ರಹ್ಮಲೋಕದ ಯಾವುದೋ ಒಂದು ಉಚ್ಚಸ್ತರದಲ್ಲಿ ನೆಲೆಸುತ್ತಾರೆಂಬುದನ್ನು ಸ್ವೀಕರಿಸಬೇಕಾಗುತ್ತದೆ.

### ನರ-ನಾರಾಯಣ ಋಷಿಗಳ ಪರಿಚಯ

ಶ್ರೀರಾಮಕೃಷ್ಣರು ನರೇಂದ್ರನಿಗೆ ಹೇಳುತ್ತಾರೆ ''ನೀನು ಆ ಪುರಾತನ ಋಷಿಯೇ ಹೌದು - ನರರೂಪಿ ನಾರಾಯಣ'' ಎಂದು. ಆದ್ದರಿಂದ ಈ ಋಷಿದ್ವಯರ ಪರಿಚಯವೂ ನಮಗಿರಬೇಕು. ಬ್ರಹ್ಮನ ಪುತ್ರನಾದ ಧರ್ಮನ ಪತ್ನಿ ದಕ್ಷಸುತೆಯ ಗರ್ಭದಲ್ಲಿ ವಿಷ್ಣುವಿನ ಅವತಾರವಾಗಿ ನರ ಹಾಗೂ ನಾರಾಯಣರೆಂಬ ಋಷಿದ್ವಯರು ಜನ್ಮತಳೆದರು. *(ಶ್ರೀಮದ್ಭಾಗವತ, ೨.೭; ದೇವೀಭಾಗವತ, ೪.೫).* ಇವರು ಬದರಿಕಾಶ್ರಮ ಹಾಗೂ ನೈಮಿಷಾರಣ್ಯದಲ್ಲಿ ತಪಸ್ಸು ಮಾಡಿ ಸಿದ್ಧಿಯನ್ನು ಪಡೆದರು. ಇವರಿಬ್ಬರೂ ಅಧಿಕಾರತ್ವವನ್ನು ಪಡೆದ ಬಗ್ಗೆ ಪುರಾಣಗಳಲ್ಲಿ ವಿಸ್ತಾರ ವರ್ಣನೆಗಳಿವೆ. ಇವುಗಳಲ್ಲಿ '**ಧರ್ಮಸ್ಯ... ಋಷಿವರ್ಯನಿಷೇವಿತಾಂಘ್ರಿಃ**'[೩] ಬಹಳ ಅರ್ಥಪೂರ್ಣ. ಇದರ ಮರ್ಮ ಹೀಗಿದೆ: 'ಆ ಸನಾತನ ಪುರುಷನು ಧರ್ಮನ ಪತ್ನಿ ದಕ್ಷದುಹಿತೆಯ ಗರ್ಭದಲ್ಲಿ ಪ್ರಶಾಂತಾತ್ಮರಾದ ಋಷಿಶ್ರೇಷ್ಠ ನರ ಮತ್ತು ನಾರಾಯಣರಾಗಿ ಪ್ರಕಟಗೊಂಡರು. ಇವರು ನಾರದಾದಿ ಭಕ್ತರಿಗೆ ಆತ್ಮತತ್ತ್ವದ ಉಪದೇಶವನ್ನು ನೀಡಿದರು.[೪] ಈ ಋಷಿಗಳು ಈಗ ಕರ್ತನ ಸೇವೆಗೈಯುತ್ತ ಕರ್ಮಾಚರಣೆಯಲ್ಲಿ ತೊಡಗಿರುವರು.' **ಇರುವರು** ಎಂಬ ಶಬ್ದ ಗಮನಾರ್ಹ. ಅಧಿಕಾರ ಪುರುಷರಾಗಿರದಿದ್ದರೆ ಈ ರೀತಿ ಈಗಲೂ ಕರ್ಮಾಚರಣೆಯಲ್ಲಿ ತೊಡಗಿರುವುದು ಸಾಧ್ಯವಿಲ್ಲ. ಸ್ವತಂತ್ರ ಉಪಾಧಿಯನ್ನು ಪಡೆದು ಈಗಲೂ ಅವರು ವಿದ್ಯಮಾನರಾಗಿರುವರೆಂದರೆ, ಈಗಾಗಲೇ ಹೇಳಿರುವಂತೆ ಅವರು ಬ್ರಹ್ಮಲೋಕ-ನಿವಾಸಿಗಳೆಂದು ಒಪ್ಪಿಕೊಳ್ಳಬೇಕಾಗುವುದು.

### ಸ್ವಾಮೀಜಿಯವರ ಬಗ್ಗೆ ಶ್ರೀರಾಮಕೃಷ್ಣರ ಮಾತುಗಳ ಮರ್ಮ

ಸ್ವಾಮೀಜಿಯವರ ಬಗ್ಗೆ ಶ್ರೀರಾಮಕೃಷ್ಣರಿಗಾದ ದರ್ಶನದ ಅಪೂರ್ವ ವರ್ಣನೆ ಹೀಗಿದೆ. ''ಒಂದು ದಿನ ನೋಡುತ್ತೇನೆ, ಸಮಾಧಿಯಲ್ಲಿ ನನ್ನ ಮನಸ್ಸು ಜ್ಯೋತಿರ್ಮಯ ಮಾರ್ಗದಲ್ಲಿ ಊರ್ಧ್ವಗಾಮಿಯಾಗಿ ಸಾಗಿತು. ಚಂದ್ರ, ಸೂರ್ಯ, ನಕ್ಷತ್ರಗಳ ಸ್ಥೂಲಜಗತ್ತನ್ನು ಸಹಜವಾಗಿಯೇ ಅತಿಕ್ರಮಿಸಿ ಮೊದಲು ಸೂಕ್ಷ್ಮವಾದ ಭಾವಜಗತ್ತನ್ನು ಪ್ರವೇಶಿಸಿತು. ಈ ಜಗತ್ತಿನ ಊರ್ಧ್ವ ಸ್ತರಗಳನ್ನು ದಾಟುತ್ತಿದ್ದಂತೆ ಮಾರ್ಗದ ಇಬ್ಬದಿಗಳಲ್ಲಿ ಅನೇಕ ದೇವ-ದೇವಿಯರು ಕಂಡರು. ಕ್ರಮಶಃ ಮನಸ್ಸು ಆ ಜಗತ್ತಿನ ದಿಗಂತವನ್ನು ತಲುಪಿದಾಗ ಅತಿಸೂಕ್ಷ್ಮ ತೇಜೋಮಯ ತೆರೆಯೊಂದು ಖಂಡ-ಅಖಂಡ (ದ್ವೈತ-ಅದ್ವೈತ) ಭುವನಗಳನ್ನು ಬೇರ್ಪಡಿಸಿದ್ದು ಕಂಡಿತು. ಆ ಜ್ಯೋತಿರ್ಮಯ ತೆರೆಯನ್ನು ಲಂಘಿಸಿ ಮನಸ್ಸು ಕ್ರಮೇಣ ಅದ್ವೈತ ಜಗತ್ತನ್ನು ಪ್ರವೇಶಿಸಿದಾಗ ಅಲ್ಲಿ ಸ್ಥೂಲವಾದ ಏನೊಂದೂ ಕಾಣಿಸಲಿಲ್ಲ. ನಿಮ್ನ ಸ್ತರಗಳಲ್ಲಿ ತಮ್ಮ ಅಧಿಕಾರತ್ವವನ್ನು ಸ್ಥಾಪಿಸಿದ್ದ ದೇವ-ದೇವಿಯರ ಪ್ರವೇಶವೂ ಅಲ್ಲಿ ಸಾಧ್ಯವಿಲ್ಲ. ಕ್ಷಣದಲ್ಲಿಯೇ ಜ್ಯೋತಿರ್ಘನ ರೂಪಿಗಳಾದ ಧ್ಯಾನಮಗ್ನ ಸಪ್ತರ್ಷಿಗಳು ಗೋಚರವಾದರು. ಜ್ಞಾನ, ಸದ್ಗುಣ, ತ್ಯಾಗ-ಪ್ರೇಮಗಳಲ್ಲಿ ದೇವ-ದೇವಿಯರೂ ಅವರಿಗೆ

---

೨. '**ತೃತೀಯೇ ಬ್ರಹ್ಮಣಃ ಸತ್ಯಲೋಕೇ ಚತ್ವಾರೋ ದೇವನಿಕಾಯಾಃ, ಅಚ್ಯುತಾಃ ಶುದ್ಧನಿವಾಸಾಃ, ಸತ್ಯಾಭಾಃ ಸಂಜ್ಞಾಸಂಜ್ಞಿನಶ್ಚ ಇತಿ**' ಇತ್ಯಾದಿ *(ಯೋಗಸೂತ್ರ ३.२೬, ವ್ಯಾ.ಸಭಾಷ್ಯ).*

೩. **ಧರ್ಮಸ್ಯ ದಕ್ಷದುಹಿತರ್ಯಜನಿಷ್ಟ ಮೂರ್ತ್ಯಾಂ**
**ನಾರಾಯಣೋ ನರ ಋಷಿಪ್ರವರಃ ಪ್ರಶಾಂತಃ।**
**ನೈಷ್ಕರ್ಮ್ಯಲಕ್ಷಣಮುವಾಚ ಚಚಾರ ಕರ್ಮ**
**ಯೋಽದ್ಯಾಪಿ ಚಾಸ್ತ ಋಷಿವರ್ಯನಿಷೇವಿತಾಂಘ್ರಿಃ॥**
*(ಶ್ರೀಮದ್ಭಾಗವತ, ೧೧.೪.೬)*

೪. '**ನಿಷ್ಕರ್ಮಭಾವಂ ಕರ್ಮಶೂನ್ಯತಾಂ ಜ್ಞಾನಯೋಗೇನ ನಿಷ್ಠಾಂ ನಿಷ್ಕ್ರಿಯಾತ್ಮಸ್ವರೂಪೇಣ ಏವ ಅವಸ್ಥಾನಮ್ ಇತಿ ಯಾವತ್**'
*(ಗೀತಾ, ३.೪, ಶಂಕರಭಾಷ್ಯ)*

ತುಲನೆಯಲ್ಲ, ಇನ್ನು ಮನುಷ್ಯನ ಬಗ್ಗೆ ಹೇಳುವುದೇನು? ವಿಸ್ಮಿತನಾಗಿ ಇವರ ಶ್ರೇಷ್ಠತೆಯನ್ನು ಕುರಿತು ಚಿಂತಿಸುತ್ತಿದ್ದಂತೆ ಅಖಂಡ ಭೇದರಹಿತ ಸಮರಸವಾದ ಜ್ಯೋತಿರ್ಮಂಡಲದ ಅಂಶವೊಂದು ಘನೀಕರಿಸಿ ದಿವ್ಯಶಿಶುವಿನ ರೂಪ ತಾಳಿತು. ಆ ದೇವಶಿಶುವು[೫] ಏಳು ಋಷಿಗಳಲ್ಲೊಬ್ಬರ ಬಳಿ ಸಾರಿ ತನ್ನ ಸುಕೋಮಲ ಬಾಹುಗಳಿಂದ ಅವರನ್ನಾಲಂಗಿಸಿ ತನ್ನ ಅಮೃತವಾಣಿಯಿಂದ ಅವರನ್ನು ಸಮಾಧಿಯಿಂದೆಚ್ಚರಿಸಲು ಪ್ರಯತ್ನಿಸಿತು. ಶಿಶುವಿನ ಮೃದುವಾದ ಪ್ರೇಮಪೂರಿತ ಸ್ಪರ್ಶದಿಂದ ಜಾಗೃತಗೊಂಡ ಋಷಿವರ್ಯರು ತಮ್ಮ ಅರ್ಧನಿಮೀಲಿತ ನೇತ್ರಗಳಿಂದ ಆ ಅಪೂರ್ವ ಶಿಶುವನ್ನು ದೃಷ್ಟಿಸತೊಡಗಿದರು. ಅವರ ಮುಖಮಂಡಲದ ಪ್ರಸನ್ನತೆಯನ್ನು ಕಂಡಾಗ ಆ ಶಿಶುವು ಅವರಿಗೆ ಅನಾದಿಕಾಲದಿಂದಲೂ ಪರಿಚಯವಿದ್ದ ಆತ್ಮೀಯ ಸಂಪದವಿರಬೇಕೆಂಬಂತೆ ತೋರಿತು. ಆನಂದಭರಿತ ಶಿಶುವು ಅವರನ್ನುದ್ದೇಶಿಸಿ, 'ನಾನು ಹೋಗುತ್ತಿದ್ದೇನೆ, ನೀನೂ ನನ್ನೊಡನೆ ಬರಬೇಕು' ಎಂದು ಕೇಳಿಕೊಂಡಿತು. ಋಷಿಯು ಮೌನವಾಗಿದ್ದರೂ ಅವರ ಪ್ರೇಮಪೂರಿತ ದೃಷ್ಟಿಯು ಸಮ್ಮತಿಯನ್ನು ಸೂಚಿಸುತ್ತಿತ್ತು. ಪ್ರೇಮಪೂರಿತ ನಯನಗಳಿಂದ ಆ ದೇವಶಿಶುವನ್ನು ದೃಷ್ಟಿಸುತ್ತ ಅವರು ಮತ್ತೆ ಧ್ಯಾನದಲ್ಲಿ ಮಗ್ನರಾದರು. ಆಶ್ಚರ್ಯಚಕಿತನಾಗಿ ನಾನು ನೋಡುತ್ತಿದ್ದಂತೆ ಅವರದೆ ಶರೀರ ಮನಗಳ ಅಂಶವು ಉಜ್ಜ್ವಲ ಜ್ಯೋತಿಯ ರೂಪವನ್ನು ತಾಳಿ ವಿಲೋಮಪಥದಲ್ಲಿ ಧರೆಗಿಳಿದು ಅವತರಿಸಿತು. ನರೇಂದ್ರನನ್ನು ನೋಡುತ್ತಲೆ, ಆ ಋಷಿಯೇ ಅವನೆಂದು ನನಗೆ ತಿಳಿಯಿತು.'' *(ಶ್ರೀರಾಮಕೃಷ್ಣ ಲೀಲಾಪ್ರಸಂಗ, ಭಾಗ ೨, ಪು.೨೮೧-೮೨)*

## ಶ್ರೀರಾಮಕೃಷ್ಣರ ಮನಸ್ಸು ಬ್ರಹ್ಮಲೋಕಕ್ಕೆ ತೆರಳಿದುದು

ಈಗಾಗಲೇ ಹೇಳಿದಂತೆ ಶ್ರೀರಾಮಕೃಷ್ಣರ ದರ್ಶನದಲ್ಲಿ 'ಚಂದ್ರತಾರಾಮಂಡಲದ ಸ್ಥೂಲಜಗತ್ತ'ನ್ನು ದಾಟಿಹೋಗುವ ಅವರ ಮನಸ್ಸು, ಪಾತಂಜಲದಲ್ಲಿ ಹೇಳಿರುವ 'ಭುವರ್ಲೋಕ' ಹಾಗು ವಿಷ್ಣುಪುರಾಣದಲ್ಲಿನ ಹೆಸರಾಂತ ಸಪ್ತರ್ಷಿಮಂಡಲವನ್ನು ಭೇದಿಸಿತ್ತೆಂದು ಕಾಣಬಹುದು. ಆದ್ದರಿಂದ ನಾವು ಶ್ರೀರಾಮಕೃಷ್ಣರು ವರ್ಣಿಸಿದ 'ಏಳುಜನ ಋಷಿಗಳು' ಸಪ್ತರ್ಷಿಮಂಡಲದ ಏಳು ಋಷಿಗಳಲ್ಲಿ ಸ್ವಾಮೀಜಿ ಒಬ್ಬರು ಎಂದು ಗಣಿಸುವ ಕೆಲವರ ಅಭಿಪ್ರಾಯವನ್ನು ನಿರಾಕರಿಸಬಹುದು. ಅವರ ಮನಸ್ಸು ಭಾವಜಗತ್ತನ್ನೂ, ದೇವ-ದೇವಿಯರ ಜಗತ್ತಾದ ದೇವಲೋಕ-ಸ್ವರ್ಗಲೋಕವನ್ನೂ ದಾಟಿ ಮುಂದೆ ಸಾಗುತ್ತಿದ್ದುದನ್ನು ಸ್ಪಷ್ಟಪಡಿಸುತ್ತದೆ. ಏಕೆಂದರೆ, ಬ್ರಹ್ಮಲೋಕ ಪ್ರಾಪ್ತಿಗಾಗಿ ದೇವಯಾನ ಮಾರ್ಗದ ವಿವರಣೆಯನ್ನು ಭಗವತೀ ಶ್ರುತಿಯು **'ಸಃ ವಾಯುಲೋಕಂ, ಸಃ ವರುಣಲೋಕಂ, ಸಃ ಪ್ರಜಾಪತಿಲೋಕಂ, ಸಃ ಬ್ರಹ್ಮಲೋಕಂ'** *(ಕೌಶೀಕತೀ ಉಪ., ೧.೩)* ಎಂದೂ, **'ದೇವಲೋಕಂ ದೇವಲೋಕಾತ್ ವೈದ್ಯುತಮ್'** *(ಬೃಹ. ಉಪ., ೬.೨.೧೫)* ಎಂದೂ ನೀಡುತ್ತವೆ. ಅಂದರೆ ಸಾಧಕನು ವಾಯುಲೋಕ, ವರುಣಲೋಕ, ಪ್ರಜಾಪತಿ ಲೋಕ, ವಿದ್ಯುಲ್ಲೋಕ ಮುಂತದ ದೇವಲೋಕಗಳನ್ನೆಲ್ಲ ಅತಿಕ್ರಮಿಸಿ, ಬಳಿಕ ಬ್ರಹ್ಮಲೋಕವನ್ನು ಪಡೆಯುತ್ತಾನೆ. ಆದ್ದರಿಂದ ಶ್ರೀರಾಮಕೃಷ್ಣರ ಮನಸ್ಸು ಸಮಸ್ತ ದೇವಲೋಕಗಳನ್ನು ದಾಟಿ ಬ್ರಹ್ಮಲೋಕವನ್ನು ಗಮಿಸಿತ್ತು ಎಂದೇ ಅವರ ಮಾತುಗಳ ತಾತ್ಪರ್ಯ.

## ಖಂಡ-ಅಖಂಡ (ದ್ವೈತ-ಅದ್ವೈತ) ಜಗತ್ತು ಎಂಬುದರ ಅರ್ಥ

ಶ್ರೀರಾಮಕೃಷ್ಣರು ಹೇಳುತ್ತಾರೆ, ತೇಜೋಮಯ ತೆರೆಯೊಂದು 'ದ್ವೈತ' ಮತ್ತು 'ಅದ್ವೈತ' ಜಗತ್ತುಗಳನ್ನು ಬೇರ್ಪಡಿಸಿತ್ತು, ಎಂದು. ಯಾವುದು ಸೋಪಾಧಿಕವೋ (ಉಪಾಧಿಗಳಿಂದ ಕೂಡಿದ್ದು), ಭೇದಯುಕ್ತವೋ ಅದೇ 'ದ್ವೈತ'. ಕರ್ಮ ಹಾಗು ಉಪಾಸನೆಯ ಅಧಿಕಾರಿಗಳು 'ನಾನು', 'ನೀನು' ಎಂಬ ಭೇದಜ್ಞಾನದಿಂದ ಕೂಡಿದ್ದು ಕರ್ಮೋಪಾಸನೆಗಳಲ್ಲಿ ತೊಡಗಿರುತ್ತಾರೆ. ಇವುಗಳಿಂದ ಯಾವ ಭೋಗ್ಯಲೋಕಗಳನ್ನು ಪಡೆಯುವರೋ ಅದನ್ನು 'ದ್ವೈತ ಜಗತ್ತು' ಎನ್ನಲಾಗುತ್ತದೆ. ಭೂಲೋಕದಿಂದೊಡಗೂಡಿ ದೇವಲೋಕದವರೆಗೆ ಸಮಸ್ತ ಲೋಕಗಳೂ ದ್ವೈತ ರಾಜ್ಯದಲ್ಲಿರುವುವು, ಏಕೆಂದರೆ ಇವು ಭೇದಜ್ಞಾನಯುಕ್ತ ಕರ್ಮ ಹಾಗೂ ಉಪಾಸನೆಯ ಫಲಸ್ವರೂಪವಾಗಿವೆ. 'ನಿರುಪಾಧಿಕ' ಅಂದರೆ ಭೇದರಹಿತವಾದುದೇ ಅಖಂಡ, ಅದ್ವೈತ. ಆ ನಿರಾಕಾರ ಅದ್ವೈತ ಬ್ರಹ್ಮವಸ್ತುವನ್ನು ಯಾರು ಆತ್ಮರೂಪವಾಗಿ ಪಡೆಯುವರೋ ಅವರೂ 'ಅದ್ವೈತ'ರೇ. ಅಖಂಡ-ಅದ್ವೈತರಾದವರು ಅಂದರೆ ನಿರಾಕಾರ ನಿರುಪಾಧಿಕ ಬ್ರಹ್ಮವಿದರು ಯಾವ ಲೋಕವನ್ನು ಪಡೆಯುವರೋ ಅದನ್ನೇ 'ಅದ್ವೈತ ರಾಜ್ಯ' ಎನ್ನುವುದು. ಅಂತಹ ಬ್ರಹ್ಮಜ್ಞಾನಿಗಳನ್ನು ಎರಡು ಶ್ರೇಣಿಗಳಾಗಿ ವಿಂಗಡಿಸಬಹುದು: ೧) ಅಖಂಡ ನಿರಾಕಾರ ಬ್ರಹ್ಮವಸ್ತುವನ್ನು **ಅಪಹತ ಪಾಪ್ಮತ್ವಾದಿ** *(ಛಾಂದೋಗ್ಯ ಉಪ. ೮.೧.೫)* ಗುಣಯುಕ್ತವಾಗಿ ಪಡೆಯುವವರು. ಹಾಗೂ, ೨) ಉಪಾಧಿರಹಿತ ನಿರ್ವಿಶೇಷ ಬ್ರಹ್ಮವಸ್ತುವನ್ನು ಆತ್ಮರೂಪವಾಗಿ ಪಡೆಯುವವರು— ನಿರ್ಗುಣ ಬ್ರಹ್ಮಾತ್ಮಜ್ಞ ಆಧಿಕಾರಿಕ ಪುರುಷರು. ಈ ಎರಡು ಶ್ರೇಣಿಯ ಬ್ರಹ್ಮಜ್ಞರೂ ಬ್ರಹ್ಮಲೋಕಕ್ಕೆ ಗಮಿಸಿ ಅಲ್ಲಿ ನೆಲೆಸುವರು.

## ಬ್ರಹ್ಮಲೋಕದ ಉಚ್ಚತಮ ಸ್ತರಕ್ಕೆ ಶ್ರೀರಾಮಕೃಷ್ಣರ ಗಮನ

''ಮನಸ್ಸು ಕ್ರಮೇಣ ಅದ್ವೈತ ರಾಜ್ಯವನ್ನು ಪ್ರವೇಶಿಸಿತು.'' **ಕ್ರಮೇಣ** ಎಂಬ ಶಬ್ದವನ್ನು ಗಮನಿಸಬೇಕು. ದ್ವೈತರಾಜ್ಯವಾದ ದೇವಲೋಕ ಸಮೂಹವನ್ನು ಅತಿಕ್ರಮಿಸಿ ಶ್ರೀರಾಮಕೃಷ್ಣರ ಮನಸ್ಸು ನಿರ್ವಿಶೇಷ ಬ್ರಹ್ಮಾತ್ಮಜ್ಞ ಆಧಿಕಾರಿಕ ಪುರುಷರ ರಾಜ್ಯ-ನಿವಾಸಸ್ಥಳವನ್ನು ಒಮ್ಮೆಲೆ ಪ್ರವೇಶಿಸಲಿಲ್ಲ. ನಡುವೆ ಸಗುಣಬ್ರಹ್ಮಾತ್ಮಜ್ಞ ಕ್ರಮಮುಕ್ತರ ನಿವಾಸಸ್ಥಳವನ್ನು ಅದು ದಾಟಿತ್ತು, ಎಂದೇ

೫. ಆ ದೇವಶಿಶು ಸ್ವಯಂ ಶ್ರೀರಾಮಕೃಷ್ಣರೇ ಆಗಿದ್ದರು ಎಂಬುದಾಗಿ 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದ ಲೇಖಕರಾದ ಸ್ವಾಮಿ ಶಾರದಾನಂದರು ಅಲ್ಲಿ ಬರೆಯುತ್ತಾರೆ. ಇದನ್ನು ಸ್ವತಃ ಲೇಖಕರೇ ಬೇರೊಂದು ಸಲ ಶ್ರೀರಾಮಕೃಷ್ಣರ ಬಾಯಿಯಿಂದ ಕೇಳಿದ್ದರು.

ತಿಳಿಯಬೇಕು. ಇಲ್ಲದಿದ್ದರೆ **ಕ್ರಮಶಃ** ಎಂಬ ಪದವು ಅರ್ಥಹೀನವಾಗುವುದು.

### ಜ್ಯೋತಿರ್ಮಯ ತೆರೆಯ ಅಸ್ತಿತ್ವ

ಶ್ರೀರಾಮಕೃಷ್ಣರು ದೇವಲೋಕ-ಬ್ರಹ್ಮಲೋಕಗಳ ನಡುವಣ ಜ್ಯೋತಿರ್ಮಯ ತೆರೆಯ ಬಗ್ಗೆ ಹೇಳುತ್ತಾರೆ. ಈ ರೀತಿಯ ಸೂಕ್ಷ್ಮ ಬೆಳಕಿನ ತೆರೆಯ ವಿವರಣೆಯೂ ಶ್ರುತಿಗಳಲ್ಲಿ ಸಿಗುತ್ತವೆ. ಭಗವತೀ ಶ್ರುತಿಯಲ್ಲಿ '**ತತ್ಪುರುಷ ಅಮಾನವಃ ಸ ಏನಾನ್ ಬ್ರಹ್ಮ ಗಮಯತಿ**' *(ಛಾಂದೋಗ್ಯ, ೪.೧೫.೫)* ಎಂದಿದೆ. ಬ್ರಹ್ಮಲೋಕದಿಂದ ಬಂದ ಒಬ್ಬ ಅಮಾನವ ಪುರುಷನು ಬ್ರಹ್ಮಲೋಕಕ್ಕೆ ಹೋಗುವವನನ್ನು ಅಲ್ಲಿಗೆ ಒಯ್ಯುವನು. ಹೇಗೆ? ನಿಮ್ನ ಸ್ಥೂಲ ಲೋಕದ ದೇವತೆಗಳು ಬ್ರಹ್ಮಲೋಕಗಾಮಿಯನ್ನು ಹೊತ್ತುಕೊಂಡು ಹೋಗುತ್ತಾರೆ. ಆದರೆ ವಿದ್ಯುಲ್ಲೋಕಕ್ಕೂ ಮೇಲೆ ಅವರಿಗೆ ಹೋಗಲಾಗಲಿಲ್ಲ. ಆದ್ದರಿಂದ ದೇವಲೋಕ ಹಾಗೂ ಬ್ರಹ್ಮಲೋಕಗಳ ನಡುವೆ ಯಾವುದೋ ತೆರೆ-ಅನುಬಂಧಕ ಇದೆಯೆಂದು ಊಹಿಸಬಹುದು. ಈ ತಡೆಯು ಜ್ಯೋತಿರ್ಮಯವಾದುದೆಂದು ಸ್ಕಂದಪುರಾಣದಿಂದ ನಾವು ತಿಳಿಯಬಹುದು. '**ಯಶ್ಚಾಯಂ ತೇಜಸಾಂ ರಾಶಿರ್ಜಾನೀಹಿ ಬ್ರಹ್ಮಸದ್ಮನಃ..**' *(ಸ್ಕಂದ ಪುರಾಣ, ವಿಷ್ಣುಖಂಡ, ಪುರುಷೋತ್ತಮ ಖಂಡ -೨೨-೩೧)* ... ''ಹೇ ರಾಜನ್, ಅವರೆದುರಿನ ಪ್ರಕಾಶವು ಕೋಟಿಚಂದ್ರರ ಸಮಾನ... ತೇಜೋರಾಶಿಯನ್ನು ಬ್ರಹ್ಮನ ನಿವಾಸದ ಜ್ಯೋತಿಯೆಂದು ತಿಳಿ.'' ಹೀಗೆ ಶ್ರೀರಾಮಕೃಷ್ಣರ ಮಾತುಗಳಿಂದ, ಅವರ ಮನಸ್ಸು ದೇವಲೋಕಗಳನ್ನು ದಾಟಿ, ಜ್ಯೋತಿರ್ಮಯ ತೆರೆಯನ್ನೂ ಅತಿಕ್ರಮಿಸಿ ಸಗುಣಬ್ರಹ್ಮಜ್ಞ ಕ್ರಮಮುಕ್ತರ ನಿವಾಸಸ್ಥಾನವಾದ ಬ್ರಹ್ಮಲೋಕದ ಸ್ತರವನ್ನೂ ಮೀರಿ ನಿರ್ಗುಣಬ್ರಹ್ಮ ಆಧಿಕಾರ ಪುರುಷರ ನಿವಾಸವನ್ನು ಪ್ರವೇಶಿಸಿತ್ತೆಂದು ತಿಳಿಯುತ್ತದೆ.

### ಅದ್ವೈತ ಭುವನದಲ್ಲಿ ಸ್ಥೂಲಮೂರ್ತಿಯ ಅಸ್ತಿತ್ವ

ಶ್ರೀರಾಮಕೃಷ್ಣರೆನ್ನುತ್ತಾರೆ, ''ಅಲ್ಲಿ ಸ್ಥೂಲವಾದುದು ಏನೂ, ಯಾರೂ ಇರಲಿಲ್ಲ.'' ಈ ನುಡಿಗಳು ಯುಕ್ತಿಸಂಗತವಾಗಿವೆ. ಹೇಗೆಂದರೆ, ಬ್ರಹ್ಮಲೋಕದ ಸರ್ವೋಚ್ಚ ಸ್ತರದಲ್ಲಿ, ನಿರ್ವಿಶೇಷ ಬ್ರಹ್ಮಾತ್ಮ ಸ್ವರೂಪದ ಅವಸ್ಥೆಯಲ್ಲಿ ಈ ಪುರುಷಶ್ರೇಷ್ಠರನ್ನು ದರ್ಶಿಸಬೇಕಾದರೆ ಅವರು ಸ್ಥೂಲ ಉಪಾಧಿಗಳನ್ನೊಡಗೊಂಡಿರಬೇಕು; ಸ್ಥೂಲ ಉಪಾಧಿಗಳಿರುವುದು ಅಲ್ಲಿ ಸಂಭವವಿಲ್ಲ. ಆದರೆ ಅಧಿಕಾರತ್ವವನ್ನು ಪಡೆದಮೇಲೆ ಬ್ರಹ್ಮನಲ್ಲಿ ಐಕ್ಯವಾಗುವುದು ಸಂಭವವಿಲ್ಲದೆ, ಈಶ್ವರೇಚ್ಛೆಯಿಂದ ಯತ್ಕಿಂಚಿತ್ ಉಪಾಧಿಯನ್ನು ಅವಲಂಬಿಸಿ ಅವರ ಅಸ್ತಿತ್ವವು ಸಂಭವಿಸುತ್ತದೆ. ಯಾವುದೇ ಸ್ಥೂಲ ಉಪಾಧಿಗಳನ್ನು ಗ್ರಹಿಸುವುದು ಬಿಡುವುದು ಈ ಪುರುಷರ ಇಚ್ಛೆ — '**ಏವಮಪಿ ಉಪನ್ಯಾಸಾತ್ ಪೂರ್ವಭಾವಾತ್ ಅವಿರೋಧಂ ಬಾದರಾಯಣಃ, ಸಂಕಲ್ಪಾ ದೇವತಾ ತು ತತ್ ಶ್ರುತೇಃ**' *(ಉತ್ತರಮೀಮಾಂಸಾ, ೪.೪.೭-೮).* ಆದ್ದರಿಂದ ಭಗವಾನ್ ಶ್ರೀರಾಮಕೃಷ್ಣರು ಮೊದಲಿಗೆ ಸ್ಥೂಲವಾದದ್ದೇನನ್ನೂ ಕಾಣದಿದ್ದರೂ ಸ್ವಲ್ಪ ಹೊತ್ತಾದ ಬಳಿಕ ಘನೀಕರಿಸಿದ ದಿವ್ಯ ಜ್ಯೋತಿರ್ಮೂರ್ತಿಗಳಾದ ಏಳು ಮಂದಿ ಪ್ರಾಚೀನ ಋಷಿಗಳು ಧ್ಯಾನಮಗ್ನರಾಗಿ ಕುಳಿತಿರುವುದನ್ನು ಕಂಡದ್ದು ಅಸಂಭವವೇನೂ ಅಲ್ಲ. ಈ ವಿಷಯವಾಗಿ ಶ್ರೀರಾಮಕೃಷ್ಣರ ಮಾತುಗಳ ಉಳಿದ ಭಾಗವೂ ಸ್ಪಷ್ಟವೇ. ಅವರ ಅತೀಂದ್ರಿಯ ಉಪಲಬ್ಧ ಜನಿತ ಈ ಮಾತುಗಳಿಂದ ಸ್ವಾಮೀಜಿಯವರು ಅತಿ ಉಚ್ಚಸ್ತರದ ಧ್ಯಾನಮಗ್ನ ನಿರ್ಗುಣಬ್ರಹ್ಮಾತ್ಮಜ್ಞರಾದ ಒಬ್ಬ ಅಧಿಕಾರಪುರುಷರೆಂಬುದು ಸ್ಪಷ್ಟವಾಗುತ್ತದೆ; ಮೂರ್ತರೂಪ ದೇವಶಿಶು ಶ್ರೀರಾಮಕೃಷ್ಣರು ಅವರನ್ನು ತಮ್ಮ ಲೀಲಾಸಹಚರರಾಗಿ ಭೂಲೋಕಕ್ಕೆ ಕರೆತಂದಿದ್ದರು.

### 'ನಾಲ್ವರಲ್ಲಿ ಒಬ್ಬರು ಹಾಗು ಸಪ್ತರ್ಷಿಗಳಲ್ಲೊಬ್ಬರು' - ತಾತ್ಪರ್ಯ

''ಅದ್ವೈತ ಜಗತ್ತಿನ ದಿವ್ಯ ಜ್ಯೋತಿರ್ಘನ ರೂಪಿ ಸಮಾಧಿಸ್ಥ ಸಪ್ತ ಋಷಿಗಳಲ್ಲಿ ನರೇಂದ್ರನು ಒಬ್ಬನು'' ಹಾಗು ''ಅದ್ವೈತ ಜಗತ್ತಿನ ನಾಲ್ಕು ಜನರಲ್ಲಿ ಒಬ್ಬ; ಸಪ್ತರ್ಷಿಗಳಲ್ಲೊಬ್ಬ ಎಂಬುದನ್ನು ನಾನು ನೋಡಿದೆ'' *(ಶ್ರೀರಾಮಕೃಷ್ಣ ಲೀಲಾಪ್ರಸಂಗ)* ಮೇಲಿನ ಎರಡು ವಾಕ್ಯಗಳಲ್ಲಿ ಅದ್ವೈತ ಲೋಕದ ಅರ್ಥಾತ್ ನಿರ್ಗುಣ ಬ್ರಹ್ಮಜ್ಞ ಆಧಿಕಾರಿಕ ಪುರುಷರ ನಿವಾಸಸ್ಥಳದಲ್ಲಿದ್ದ ಏಳು ಜನ ಧ್ಯಾನಮಗ್ನ ಋಷಿಗಳಲ್ಲಿ ನಾಲ್ವರು ವಿಶೇಷವಾಗಿದ್ದರು ಎಂಬುದನ್ನು ಸೂಚಿಸಲಾಗಿದೆ. 'ಉತ್ತರ ಮೀಮಾಂಸ'ದಲ್ಲಿ*(೪.೩.೬)* ಅಪ್ರತೀಕಾವಲಂಬನೆಯ ನಿರೂಪಣೆಯಿದೆ - ಯಾರು ಪ್ರತೀಕವನ್ನವಲಂಬಿಸಿ ಪರಬ್ರಹ್ಮನ ಉಪಾಸನೆಗೈಯುವರೋ ಅವರು ಬ್ರಹ್ಮಲೋಕಕ್ಕೆ ಹೋಗಲಾರರು. ಆದರೆ ಮೇಲಿನ ಶಾಸ್ತ್ರದ 'ಇಂಗಿತ ಕರ್ಮಾಧಿಕರಣ'ದಲ್ಲಿ *(೧.೩.೪)* ಹೀಗೆ ನಿರೂಪಿಸಲಾಗಿದೆ: ''ಯಾರು ಪ್ರಣವ (ಓಂಕಾರ) ಪ್ರತೀಕವನ್ನವಲಂಬಿಸಿ ನಿರ್ಗುಣ ಬ್ರಹ್ಮೋಪಾಸನೆಯಿಂದ ಸಿದ್ಧಿಯನ್ನು ಪಡೆಯುವರೋ ಅವರು ಬ್ರಹ್ಮಲೋಕಕ್ಕೆ ಹೋಗುವರು ಹಾಗೂ ಕ್ರಮಮುಕ್ತಿಯನ್ನು ಪಡೆಯುವರು;[೬] ಮತ್ತು ಯಾವುದೇ ಪ್ರತೀಕವನ್ನು ಅವಲಂಬಿಸದೆ ನಿರ್ಗುಣಬ್ರಹ್ಮವಿದ್ಯೆಯನ್ನವಲಂಬಿಸಿ ಸಿದ್ಧಿಲಾಭವನ್ನು ಪಡೆದಂತಹವರು ಉತ್ಕ್ರಮಿಸದೆ ಇಲ್ಲಿಯೇ ಬ್ರಾಹ್ಮೀಸ್ಥಿತಿಯನ್ನು ಪಡೆಯುವರು '**ನ ತಸ್ಯ ಪ್ರಾಣಾಃ ಉತ್ಕ್ರಾಮಯಂತಿ**'*(ಬೃಹದಾರಣ್ಯಕ ಉಪ., ೪.೪.೬).* ಆದರೆ ಪರಮೇಶ್ವರನ ಇಚ್ಛೆಯಿಂದ ಅಧಿಕಾರಿ ಪದವನ್ನು ಪಡೆದವರು ಅಧಿಕಾರಪದದ ದೀರ್ಘಪ್ರಾರಬ್ಧವು ಕ್ಷಯವಾಗುವ ತನಕ ಬ್ರಹ್ಮಲೋಕದಲ್ಲಿ ಸ್ಥಿರರಾಗಿರುತ್ತಾರೆ, ಎಂಬುದನ್ನು ಈಗಾಗಲೇ ತಿಳಿಯಲಾಗಿದೆ. ಆದ್ದರಿಂದ 'ಅದ್ವೈತ ರಾಜ್ಯ'ದ ಏಳು ಮಂದಿ ಋಷಿಗಳಲ್ಲಿ ಎರಡು ಪ್ರಕಾರದ ನಿರ್ಗುಣ ಬ್ರಹ್ಮಜ್ಞರ ಬಗ್ಗೆ ಶ್ರೀರಾಮಕೃಷ್ಣರು ಹೇಳಿರುವರೆಂದು ತಿಳಿದು

---

೬. **'ತ್ರಿಮಾತ್ರೇಣ ಓಂಕಾರೇಣ ಆಲಂಬನೇನ ಪರಮಾತ್ಮಾನಮ್ ಅಭಿಧ್ಯಾಯತಃ ಫಲಂ ಬ್ರಹ್ಮ ಲೋಕಪ್ರಾಪ್ತಿಃ, ಕ್ರಮೇಣ ಚ ಸಮ್ಯಕ್ ಜ್ಞಾನೋತ್ಪತ್ತಿಃ ಇತಿ ಕ್ರಮಮುಕ್ತ್ಯಭಿಪ್ರಾಯಮ್ ಏತದ್ ಭವಿಷ್ಯತಿ'** ಇತ್ಯಾದಿ. *(ಬ್ರಹ್ಮಸೂತ್ರ, ೧.೩.೧೩, ಶಾರೀರಕಭಾಷ್ಯ)*

ಬರುತ್ತದೆ. ಇವರುಗಳಲ್ಲಿ ನಾಲ್ಕು ಮಂದಿ[೭] ಅಪ್ರತೀಕಾವಲಂಬನೆಯ ನಿರ್ಗುಣ ಬ್ರಹ್ಮವಿದ್ಯೆಯ ಅನುಗಾಮಿಗಳಾಗಿದ್ದು, ಉಳಿದ ಮೂವರು ಪ್ರಣವ ಪ್ರತೀಕಾವಲಂಬಿಗಳಾಗಿ ನಿರ್ಗುಣ ಬ್ರಹ್ಮವಿದ್ಯೆಯ ಪಥವನ್ನನುಸರಿಸಿ ಕ್ರಮಮುಕ್ತಿಯನ್ನು ಪಡೆದ ನಿರ್ಗುಣಬ್ರಹ್ಮವಿದರು. ನಿರ್ಗುಣಬ್ರಹ್ಮವಿದರಾಗಿ **'ಸಾಧನೋತ್ಕರ್ಷೇ ಫಲೋತ್ಕರ್ಷಃ'** ಎಂಬ ನೀತಿಯನ್ನು ಅನ್ವಯಿಸಿದರೆ ಅಖಂಡ-ಅದ್ವೈತ-ಧಾಮ ನಿವಾಸಿಗಳಾದ ಸಪ್ತರ್ಷಿಗಳನ್ನು ಶ್ರೀರಾಮಕೃಷ್ಣರು ಎರಡು ರೀತಿಯಾಗಿ ವಿಂಗಡಿಸಿರುವುದರಲ್ಲಿ ಯಾವ ವಿಪರ್ಯಾಸವೂ ಇಲ್ಲ.

### ಸ್ವಾಮಿ ವಿವೇಕಾನಂದರು ನಾರಾಯಣ ಋಷಿಯ ಅವತಾರ

ಶ್ರೀರಾಮಕೃಷ್ಣರು ನರೇಂದ್ರನನ್ನುದ್ದೇಶಿಸಿ ಹೇಳುತ್ತಾರೆ, ''ನೀನು ಅದೇ ಪುರಾತನ ಋಷಿ ನರರೂಪ ನಾರಾಯಣನೆಂದು ನನಗೆ ತಿಳಿದಿದೆ, ಪ್ರಭು'' *(ಶ್ರೀರಾಮಕೃಷ್ಣ ಲೀಲಾಪ್ರಸಂಗ)* — ಇದನ್ನು ನಾವು ಎರಡು ರೀತಿಯಲ್ಲಿ ಅರ್ಥೈಸಬಹುದು. ೧) ನಾರಾಯಣ – ಅರ್ಥಾತ್ ಪುರಾಣಕಾಲದಲ್ಲಿ ಅವತರಿಸಿಬಂದ ಆ ನರಋಷಿ ನೀನು ಎಂಬುದು ನನಗೆ ತಿಳಿದಿದೆ. (೨) ನೀನು ಅದೇ ಪುರಾತನ ಋಷಿ ನಾರಾಯಣನೇ ಈಗ ನರರೂಪವನ್ನು ಧರಿಸಿ ಬಂದಿದ್ದೀಯೆ, ಎಂದು. ಆದರೆ ಒಂದು ವಸ್ತುವಿಗೆ ಎರಡು ಸ್ವರೂಪಗಳಿರುವುದಿಲ್ಲ. ಮತ್ತೊಂದಡೆ ಶ್ರೀರಾಮಕೃಷ್ಣರು ಹೀಗೆ ಹೇಳುತ್ತಾರೆ ''ನಾರಾಯಣ, ನೀನು ನನಗಾಗಿ ದೇಹಧಾರಣೆ ಮಾಡಿರುವೆ.'' ನರೇಂದ್ರನೇ ನಾರಾಯಣ ಎಂದು ಕಡೆಗೆ ಹೇಳಿದ ಮಾತುಗಳಲ್ಲಿ ಯಾವ ಸಂದೇಹವೂ ಮೂಡುವುದಿಲ್ಲ. **'ಸಂದಿಗ್ಧೇ ತು ವಾಕ್ಯಶೇಷಾತ್'** – ಸಂದಿಗ್ಧ ಪರಿಸ್ಥಿತಿಯಲ್ಲಿ ಕೊನೆಯ ಮಾತುಗಳನ್ನು ಸ್ವೀಕರಿಸತಕ್ಕದ್ದು ಕೊನೆಗೆ ಹೇಳಿದ ಮಾತುಗಳ ಅನುಸಾರವಾಗಿಯೇ ಮೊದಲ ವಾಕ್ಯವನ್ನು ಅರ್ಥೈಸಬೇಕು. ಅಂದರೆ ಆಗ ನರೇಂದ್ರನೇ ನಾರಾಯಣ ಋಷಿಯ ಅವತಾರ ಎಂಬುದು ಸಿದ್ಧವಾಗುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ, ಸ್ವಾಮಿ ವಿವೇಕಾನಂದರು ಬ್ರಹ್ಮಲೋಕ ನಿವಾಸಿ ಆಧಿಕಾರಿಕ ಪುರುಷನಾದ ನಾರಾಯಣ ಋಷಿ; ಪರಮೇಶ್ವರನ ಯೋಗಬಲದಿಂದ ಲೋಕಶಿಕ್ಷಣಕ್ಕಾಗಿ ಅವತರಿಸಿರುವರು ಎಂಬುದು ಶ್ರೀರಾಮಕೃಷ್ಣರ ನುಡಿಗಳಿಂದ ಸ್ಪಷ್ಟವಾಗುತ್ತದೆ.

---

೭. ಈ ನಾಲ್ಕು ಜನರಲ್ಲಿ ಸ್ವಾಮೀಜಿ ಒಬ್ಬರು ಮತ್ತು **'ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋऽಪಿ ಸಃ'** *(ಗೀತಾ: ೬.೪೪)* ಇತ್ಯಾದಿ ಭಗವಂತನ ನುಡಿಗಳಿಗೆ ಅನುಸಾರ ಜೀವನದಲ್ಲಿ ಅವರು ಪ್ರತೀಕಾವಲಂಬನೆಯಿಂದ ವಿದ್ಯೆಯನ್ನು ಪಡೆದ ಯಾವ ವರ್ಣನೆಯೂ ಇಲ್ಲವಾದ್ದರಿಂದ ಈ ನಾಲ್ಕು ಜನರನ್ನು ಅಪ್ರತೀಕಾವಲಂಬನೆಯನ್ನು ಅನುಕರಿಸಿರುವರೆಂದು ಗ್ರಹಿಸಲಾಗಿದೆ.

# ಆಧ್ಯಾತ್ಮಿಕ ಪಥದಲ್ಲಿ ವಿಜ್ಞಾನಿ

ಪ್ರವ್ರಾಜಿಕಾ ಪರಮಪ್ರಾಣಾ

(ಭಾಗ ಮೂರು)

### ವಿವೇಕಾನಂದ ಲ್ಯಾಬೊರೇಟರಿ:

ಆಲ್ಮೋರಾದಲ್ಲಿ ನೆಲೆಸಿ ಕೆಲಸವನ್ನು ಆರಂಭಿಸಿದ ನಂತರ, ದೇಶದ ಲಕ್ಷಾಂತರ ಬಡಜನಗಳ ಹಸಿದ ಹೊಟ್ಟೆಯನ್ನು ತುಂಬಿಸುವುದೇ ಅವರ ಸಂಶೋಧನೆಯ ಗುರಿಯಾಯಿತು. ಅವಿದ್ಯಾವಂತ ರೈತರಿಗೆ ಹೊಸ ಮಾದರಿಯ ಯಂತ್ರಗಳ ಬಳಕೆಯನ್ನು ಕಲಿಸಿ, ವಿಜ್ಞಾನದ ಶಿಕ್ಷಣವನ್ನು ಕೊಟ್ಟು ಕೃಷಿಯ ಮಟ್ಟವನ್ನು ಉನ್ನತಗೊಳಿಸುವ ನಾನಾ ರೀತಿಯ ಯೋಜನೆಗಳನ್ನು ಹಾಕಿಕೊಂಡರು. ಆಲ್ಮೋರಾದ ಸುತ್ತಮುತ್ತಲಿನ ಜಾಗಗಳಲ್ಲಿ ಸಕ್ಕರೆಯನ್ನು ಹೊರಗಿನಿಂದ ತರಿಸಿಕೊಳ್ಳಬೇಕಾಗಿತ್ತು. ಬಂಗಾಳದಲ್ಲಿ ಪ್ರಚಲಿತವಾಗಿರುವ ಈಚಲು ಮರದ ಹಾಲಿನಿಂದ ಬೆಲ್ಲವನ್ನು ತಯಾರಿಸುವ ವಿಧಾನವನ್ನು ಬೋಶಿ ಅಲ್ಲಿಯ ರೈತರಿಗೆ ಕಲಿಸಿಕೊಟ್ಟರು. ಈ ಮಧ್ಯೆ ಬೋಶಿ ಇಂಗ್ಲೆಂಡ್ ಮತ್ತು ಅಮೆರಿಕಾಗಳ ವಿಶ್ವವಿದ್ಯಾಲಯಗಳಲ್ಲಿ ಎರಡು ವರ್ಷ ಕಳೆದು ಹಿಂದಿರುಗಿದರು. ೧೯೩೫ರಲ್ಲಿ ರಷ್ಯಾದಲ್ಲಿ ನಡೆದ ವೈಜ್ಞಾನಿಕ ಸಮ್ಮೇಳನಕ್ಕೆ ಆಹ್ವಾನಿಸಲ್ಪಟ್ಟು, ಅಲ್ಲಿಗೆ ಹೋದ ಬೋಶಿ ಸೇನ್‌ಗೆ ವರ್ನಲೈಸೇಶನ್ (Vernalisation) ಬಗ್ಗೆ ಇನ್ನೂ ಹೆಚ್ಚಿನ ವಿಚಾರಗಳು ತಿಳಿದುಬಂದವು. ಬೀಜ ಅಥವಾ ಸಸಿಗಳನ್ನು ನೆಡುವ ಮೊದಲು ಕೆಲವು ಪ್ರಯೋಗಗಳಿಗೆ ಗುರಿಮಾಡಿ ನಂತರ ಅವನ್ನು ಜಮೀನಿನಲ್ಲಿ ನೆಟ್ಟಾಗ ಫಸಲು ದ್ವಿಗುಣವಾಗಿ ಸಿಗುವಂತೆ ಮಾಡುವುದೇ ವರ್ನಲೈಸೇಶನ್. ಈ ಪದ್ಧತಿಯನ್ನು ಉಪಯೋಗಿಸಿ ಭಾರತದ ಬಡರೈತರಿಗೆ ಸಹಾಯ ಮಾಡಲು ಬೋಶಿ ತಮ್ಮ ಲ್ಯಾಬೊರೇಟರಿಯಲ್ಲಿ ಪ್ರಯೋಗಗಳನ್ನು ಆರಂಭಿಸಿದರು. ಅಮೆರಿಕಾ ಯೂರೋಪ್ ಮತ್ತು ಆಫ್ರಿಕಾ ದೇಶಗಳಿಂದ ಭಾರತದ ನೆಲಕ್ಕೆ ಹೊಂದಿಕೊಳ್ಳುವಂಥ ಬೀಜಗಳನ್ನು ತರಿಸಿ, ಆಲ್ಮೋರಾದಲ್ಲಿ ಅವುಗಳನ್ನು ನೆಟ್ಟು ಬೆಳೆಸುವ ಯೋಜನೆಯನ್ನು ಹಾಕಿಕೊಂಡರು. ಗೋಧಿ ಮತ್ತು ಜವೆ ಗೋಧಿಗಳ ಬೀಜಗಳನ್ನು ಮೆಕ್ಸಿಕೋದಿಂದ ತರಿಸಿ ಮೊದಲು ತಮ್ಮ ಲ್ಯಾಬೊರೇಟರಿಯಲ್ಲಿ ಪರೀಕ್ಷಿಸಿದ ನಂತರ ಉಚಿತವಾಗಿ ರೈತರಿಗೆ ಹಂಚಿದರು. ಆಫ್ರಿಕಾದ ಸ್ಟಾರ್‌ಗ್ರಾಸ್ (ಒಂದು ರೀತಿಯ ಹುಲ್ಲು) ಹಸುಗಳಿಗೆ ತುಂಬ ಪುಷ್ಟಿಕರ ಆಹಾರವೆಂದು ತಿಳಿದ ಮೇಲೆ ಅದರ ಬೀಜಗಳನ್ನು ತಮ್ಮ ಲ್ಯಾಬೊರೇಟರಿಗೆ ತರಿಸಿದರು. ಈ ಹುಲ್ಲು ಆಲ್ಮೋರಾದ ನೆಲದಲ್ಲಿ ಬಹುಬೇಗ ಬೆಳೆಯಿತು. ನಂತರ ರೈತನೊಬ್ಬನನ್ನು ಒಪ್ಪಿಸಿ ಅವನ ದನವೊಂದಕ್ಕೆ ಅದನ್ನು ತಿನ್ನಿಸಲಾಯಿತು. ಅದು ಲವಲವಿಕೆಯಾಗಿ ಚೆನ್ನಾಗಿಯೇ ಇರುವುದನ್ನು ಕೆಲವು ದಿನ ಗಮನಿಸಿ ನೋಡಿದ ಮೇಲೆ, ಬೇರೆ ಬೇರೆ ರೈತರನ್ನು ಕರೆಸಿ, ಅವರುಗಳಿಗೆ ಆ ಹುಲ್ಲಿನ ಗುಣಗಳನ್ನು ವಿವರಿಸಿ ಬೀಜಗಳನ್ನು ಹಂಚಲಾಯಿತು. ಹಿಮಾಲಯದಲ್ಲಿ ಬೆಟ್ಟ ಕುಸಿದು ಬೀಳುವುದನ್ನು ತಡೆಯಲು ಈ ಹುಲ್ಲನ್ನು ಎಲ್ಲ ಕಡೆಯೂ ಬೆಳೆಸುವಂತೆ ಬೋಶಿ ಸರ್ಕಾರಕ್ಕೆ ನಿವೇದನೆ ಮಾಡಿದರು. ಈ ಹುಲ್ಲಿನ ಬೇರುಗಳು ನೆಲದೊಳಗೆ ಹರಡಿಕೊಂಡು ಮಣ್ಣನ್ನು ಬಿಗಿಯಾಗಿ ಕಚ್ಚಿಕೊಂಡು ಬೆಳೆಯುತ್ತಿದ್ದವು. ಉತ್ತರ ಪ್ರದೇಶದ ಸರ್ಕಾರ ಇದಕ್ಕೆ ಸರಿಯಾದ ಪ್ರತಿಕ್ರಿಯೆ ತೋರಿಸದಿದ್ದರೂ ಪಶ್ಚಿಮ ಬಂಗಾಳ ಬೋಶಿಯ ಮಾತಿನಂತೆ ದಾಮೋದರ ನದಿಯ ದಡದ ಮೇಲೆ ಕೆಲವೆಡೆ ಈ ಹುಲ್ಲು ಬೆಳೆಯುವಂತೆ ಮಾಡಿತು. ರಾಮಿ ಎಂಬ ನಾರುಗಳಿಂದ ಕೂಡಿದ ಗಿಡವನ್ನು ಉಣ್ಣೆ, ಹತ್ತಿ ಮತ್ತು ಜೂಟ್‌ಗಳೊಂದಿಗೆ ಸೇರಿಸಿ, ಗಟ್ಟಿಯಾದ ಬೆಚ್ಚಗಿನ ಬಟ್ಟೆಗಳನ್ನು ನೇಯುವ ವಿಧಾನವನ್ನು ರೈತರಿಗೆ ತೋರಿಸಿಕೊಟ್ಟರು. ಮೊದಮೊದಲು ಉತ್ತರ ಪ್ರದೇಶ ಸರ್ಕಾರ ಬೋಶಿಯ ಈ ಎಲ್ಲಾ ಪ್ರಯೋಗಗಳನ್ನು ಅರಿತೂ ಅರಿಯದಂತೆ ಉದಾಸೀನವಾಗಿಯೇ ಇತ್ತು. ಆದರೆ ಕ್ರಮೇಣ ಈ ಹೊಸ ಹೊಸ ಪ್ರಯೋಗಗಳು ಸುತ್ತಮುತ್ತಲಿನ ಹಳ್ಳಿಗಳ ಜೀವನದಲ್ಲಿ ನಿಧಾನವಾಗಿ ಮಾರ್ಪಾಟನ್ನು ತರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಾಗ ಅದು ತಾನಾಗಿಯೇ ಬೋಶಿಗೆ ಹಣದ ಸಹಾಯ ಕಳುಹಿಸಲಾರಂಭಿಸಿತು. ವರ್ಷದ ಕೊನೆಯಲ್ಲಿ ಈ ಹಣದ ಲೆಕ್ಕವನ್ನು ಕೊಡುವಂತೆ ಕೇಳಿಕೊಂಡು ಬೋಶಿಯ ಬಳಿ ತಮ್ಮ ಆಡಿಟರನ್ನು ಕಳುಹಿಸಿತು. ಆತನಿಗೆ ಬೋಶಿ ಕೆಲವು ಕಾಗದಪತ್ರಗಳನ್ನು ಕೊಟ್ಟರು. ಒಂದು ಕಾಗದದಲ್ಲಿ ಸರ್ಕಾರದಿಂದ ತನಗೆ ಸಿಕ್ಕ ಒಟ್ಟು ಹಣ ಆದ ಖರ್ಚು, ಬ್ಯಾಂಕಿನಲ್ಲಿರುವ ಬಾಕಿ ಹಣ ಎಷ್ಟೆಂದು ಬರೆಯಲಾಗಿತ್ತು. ಆ ಕಾಗದದ ಜೊತೆ ಕೆಲವು ಬಿಲ್‌ಗಳನ್ನು ಗುಂಡುಸೂಜಿಯಲ್ಲಿ ಚುಚ್ಚಿ ಜೋಡಿಸಿ ಇಡಲಾಗಿತ್ತು. ಲೆಕ್ಕ ತನಿಖೆ ಮಾಡಲು ಬಂದವನು ಇದನ್ನು ಕಂಡು ಗಾಬರಿಯಾಗಿ, ''ನೀವು ಹಣಕಾಸಿನ ಲೆಕ್ಕವನ್ನು ಹೀಗೆ ಇಟ್ಟಿದ್ದೀರಾ!? ನೀವು ಮಾಡಿದ ಪ್ರತಿಯೊಂದು ಖರ್ಚಿಗೂ ಬಿಲ್ ಬೇಕು. ಹಳ್ಳಿಯ ಜನಕ್ಕೆ ಸಹಾಯ ಮಾಡಲು ನೀವು ದುಡ್ಡು ಕೊಟ್ಟಿದ್ದರೆ ಅವರ ಸಹಿ ಬೇಕು. ಎಲ್ಲವನ್ನೂ ತಾರೀಖಿಗೆ ಅನುಗುಣವಾಗಿ ನೋಟ್ ಪುಸ್ತಕದಲ್ಲಿ ಬರೆದು, ಬಿಲ್ಲುಗಳ ಜೊತೆಗೆ ನಮಗೆ ಕೊಡಬೇಕು'' ಎಂದರು. ಇದನ್ನೆಲ್ಲಾ ಶಾಂತವಾಗಿ ಕೇಳುತ್ತಿದ್ದ ಬೋಶಿ ಹೇಳಿದರು. ''ನಾನು ಸಂಶೋಧನೆ ಮಾಡಲೋ ಅಥವಾ ನಿಮ್ಮ ಲೆಕ್ಕದ ಪುಸ್ತಕವನ್ನೇ ಇಟ್ಟುಕೊಂಡು ಕೂರಲೊ? ನನಗೆ ನಿಮ್ಮ ಸರ್ಕಾರದ ಹಣ ಬೇಕಾಗಿಲ್ಲ.'' ಬಂದವರು ಪೆಚ್ಚಾದರು. ಇದುವರೆಗೂ ಅವರಿಗೆ ಯಾರೂ ಹೀಗೆ ಉತ್ತರಿಸಿರಲಿಲ್ಲ. ಈ ವಿಚಾರ ತಿಳಿದ ಮೇಲೆ ಸರ್ಕಾರ ತಾನಾಗಿಯೇ ಮುಂದೆ ಬಂದು ವಿವೇಕಾನಂದ ಲ್ಯಾಬೊರೇಟರಿಯ ಲೆಕ್ಕಪತ್ರಗಳನ್ನು ಬರೆದಿಡಲು ತಾವೇ ಸಂಬಳ ಕೊಟ್ಟು ಜನರನ್ನು ನಿಯುಕ್ತಿ ಮಾಡಿತು. ಆಲ್ಮೋರಾದಿಂದ ೭ ಮೈಲು ದೂರದಲ್ಲಿನ ಹವಾಲ್‌ಬಾಗ್ ಎಂಬ ಜಾಗದಲ್ಲಿ ೨೦೦ ಎಕರೆ ಜಮೀನನ್ನು ಬೋಶಿಗೆ ಕೊಟ್ಟು ಕೃಷಿಯ ಬೆಳೆಯ ಬಗ್ಗೆ ಅವರ ಸಂಶೋಧನೆಯ ಅಭಿವೃದ್ಧಿಗೆ ಸಹಾಯ ನೀಡಿತು. ೧೯೪೩ರಲ್ಲಿ ವಿಶಾಲವಾದ ಜಮೀನಿನಲ್ಲಿ ವಿವೇಕಾನಂದ ಲ್ಯಾಬೊರೇಟರಿಯ ಕಟ್ಟಡ ನಿರ್ಮಾಣದ ಕೆಲಸ ಆರಂಭವಾಯಿತು.

೧೯೫೭ರಲ್ಲಿ ಭಾರತ ಸರ್ಕಾರ ಸೇನರಿಗೆ ಪದ್ಮಭೂಷಣ ಪ್ರಶಸ್ತಿಯನ್ನು ಕೊಟ್ಟಿತು. ೧೬.೦೩.೧೯೭೧ ರಲ್ಲಿ ಪಂತ್‌ನಗರ ಕೃಷಿ ವಿಶ್ವ

ವಿದ್ಯಾಲಯ ಕೃಷಿಯ ಕ್ಷೇತ್ರದಲ್ಲಿ ನೊಬೆಲ್ ಪ್ರಶಸ್ತಿ ಪಡೆದಿದ್ದ ಮೆಕ್ಸಿಕೋದ ನಾರ್ಮನ್ ಬೋರ್‌ಲಾಗ್‌ರೊಂದಿಗೆ ಬೋಶಿಸೇನರಿಗೆ ಡಾಕ್ಟರೇಟ್ ಕೊಟ್ಟಿತು. ಹೀಗೆ ದೇಶವಿದೇಶಗಳ ಕೃಷಿ ಹಾಗೂ ವೈಜ್ಞಾನಿಕ ಸಂಸ್ಥೆಗಳು ಬೋಶಿಯ ಕೆಲಸದ ನಿಷ್ಠೆ ಹಾಗೂ ಮಹತ್ವಗಳನ್ನು ಗುರುತಿಸಿ, ವಿವಿಧ ರೀತಿಯಲ್ಲಿ ತಮ್ಮ ಗೌರವವನ್ನು ತೋರಿಸಲಾರಂಭಿಸಿದವು. ಬೋಶಿ ಮಾತ್ರ ತಮ್ಮ ಸರಳವಾದ ನಿರಾಡಂಬರ ಜೀವನವನ್ನು ಬದಲಿಸದೆ ಅವಿಶ್ರಾಂತ ದುಡಿಮೆಯನ್ನು ಮುಂದುವರೆಸಿದರು. ''ಈ ಎಲ್ಲಾ ಹೆಸರು ಕೀರ್ತಿಗಳ ಹಾವಳಿಯ ನಡುವೆ ನನ್ನ ವ್ಯಕ್ತಿತ್ವಕ್ಕೆ ಹಾನಿಯಾಗದಂತೆ ಸ್ವಾಮೀಜಿ ರಕ್ಷಿಸುತ್ತಿದ್ದಾರೆ'' ಎಂದು ಅವರು ಹೇಳುತ್ತಿದ್ದರು.

### ಸ್ಮೃತಿಯ ಮಂಥನ

ಶ್ರೀಮಾತೆ, ಸ್ವಾಮಿ ಬ್ರಹ್ಮಾನಂದರು ಹಾಗೂ ಸದಾನಂದರೊಡನೆ ಒಡನಾಟ ಬೋಶಿಯ ಜೀವನದ ಮೇಲೆ ಅಳಿಸಲಾಗದ ಪರಿಣಾಮವನ್ನು ಬೀರಿತ್ತು. ಆಗ ನಡೆದ ಅನೇಕ ಘಟನೆಗಳನ್ನು ಬೋಶಿ ತಮ್ಮನ್ನು ಭೇಟಿ ಮಾಡಲು ಬಂದವರೊಡನೆ ಹಂಚಿಕೊಳ್ಳುತ್ತಿದ್ದರು. ಸ್ವಾಮಿ ಬ್ರಹ್ಮಾನಂದರು ಬಾಗ್‌ಬಜಾರಿನಲ್ಲಿ ಶ್ರೀಯುತ ಬಲರಾಮ ಬಸುವಿನ ಮನೆಯಲ್ಲಿ ನೆಲೆಸಿದಾಗಲೆಲ್ಲಾ ತಮಗೆ ಕ್ಷೌರ ಮಾಡುವಂತೆ ಬೋಶಿಗೆ ಹೇಳಿ ಕಳಿಸುತ್ತಿದ್ದರು. ಒಮ್ಮೆ ಮಳೆ ಬರುತ್ತಿರುವುದನ್ನು ಕಂಡು ಅವರಿಗೆ ತೊಂದರೆಯಾಗಬಹುದೆಂದು ಬೋಶಿ ಹೋಗಲಿಲ್ಲ. ಸಂಜೆ ಕೆಲಸದಿಂದ ಹಿಂತಿರುಗಿದವರೇ ಬಲರಾಮನ ಮನೆಗೆ ಹೋದರು. ಬ್ರಹ್ಮಾನಂದರ ಸುತ್ತಲೂ ಅನೇಕ ಜನ ಸೇರಿದ್ದರು. ಮಾತುಕತೆ ನಡೆಯುತ್ತಿತ್ತು. ಬೋಶಿಯನ್ನು ಕಂಡೊಡನೇ ಬ್ರಹ್ಮಾನಂದರು ತಮ್ಮ ಗಲ್ಲವನ್ನು ಉಜ್ಜಿಕೊಳ್ಳುತ್ತಾ ಉಫ್ ಎಂದು ಶಬ್ದ ಮಾಡಿದರು. ಉಳಿದ ಜನಗಳಿಗೆ ಇದು ಗಮನಕ್ಕೂ ಬರಲಿಲ್ಲ. ಆದರೆ ಬೋಶಿಗೆ ತನ್ನ ತಪ್ಪಿನ ಅರಿವಾಯಿತು. ತಾನೇ ನಿರ್ಧಾರ ತೆಗೆದುಕೊಳ್ಳಬಾರದಾಗಿತ್ತು. ಯಾರ ಸೇವೆ ಮಾಡುತ್ತಿದ್ದೇನೆಯೋ ಅವರ ಇಚ್ಛೆಯೇ ಮುಖ್ಯ ಎಂದುಕೊಂಡರು. ಆ ಮನೆಯ ಪುಟ್ಟ ಹುಡುಗಿಯೊಬ್ಬಳು ಬೋಶಿ ಆಗಾಗ ಬಂದು ಬ್ರಹ್ಮಾನಂದರ ಕ್ಷೌರಮಾಡಿ ಹೋಗುವುದನ್ನು ಗಮನಿಸಿ, ಅವರ ಸೇವಕರಾದ ಸ್ವಾಮಿ ಶಂಕರಾನಂದರನ್ನು ಕೇಳಿದಳು. ''ಆ ಕ್ಷೌರದವನಿಗೆ ಅಷ್ಟು ಒಳ್ಳೆಯ ಬಟ್ಟೆಗಳನ್ನು ಯಾರು ಕೊಟ್ಟರು?'' ಶಂಕರಾನಂದರು ನಗುತ್ತಾ ಹೇಳಿದರು, ''ಅವನೇನು ಕಡಿಮೆ ಎಂದುಕೊಂಡೆಯಾ? ಅವನು ಸ್ವಾಮಿ ಬ್ರಹ್ಮಾನಂದರ ಕ್ಷೌರದವನು!''

ಬೋಶಿ ಅಂಗಮರ್ದನ ಮಾಡುವುದರಲ್ಲಿ ಪಟುವಾಗಿದ್ದರು. ಆಗಾಗ ಬ್ರಹ್ಮಾನಂದರಿಗೆ ಅದನ್ನು ಮಾಡಲು ಹೋಗುತ್ತಿದ್ದರು. ಇಂಥ ಸಮಯದಲ್ಲೊಮ್ಮೆ ಬ್ರಹ್ಮಾನಂದರು ಅವರಿಗೆ ಹೇಳಿದರು, ''ಜಪ, ತಪಸ್ಸು, ದಾನ, ಧರ್ಮಗಳಿಂದ ಭಗವಂತನನ್ನು ಪಡೆಯಬಹುದೆ? ಬಲವಂತ ಮಾಡಿ ಯಾರೂ ದೇವರನ್ನು ಪಡೆಯಲಾರರು.'' ಈ ಮಾತುಗಳು ಬೋಶಿಗೆ ತುಂಬಾ ಹಿಡಿಸಿದವು. ಡಾ. ಜೆ.ಸಿ. ಬೋಸರ ವೈಜ್ಞಾನಿಕ ಸಂಸ್ಥೆಯಲ್ಲಿ ಬೆಳಿಗ್ಗೆಯಿಂದ ರಾತ್ರಿಯವರೆಗೆ ದುಡಿಯುವುದನ್ನು ಬಿಟ್ಟು ಆತ ಇನ್ನೇನೂ ಯೋಚಿಸುತ್ತಿರಲಿಲ್ಲ. ಮಹಾರಾಜ್ ಮತ್ತೆ ಮುಂದುವರೆಸಿ ಹೇಳಿದರು, ''ಆದರೆ'', ಬೋಶಿ ಮನಸ್ಸಿನಲ್ಲೇ ಅಂದುಕೊಂಡರು, ಮತ್ತೇಕಪ್ಪಾ ಈ 'ಆದರೆ' ಬಂತು? ''ಆದರೆ ನಿತ್ಯ ನಿಯಮಿತವಾಗಿ ಆಧ್ಯಾತ್ಮಿಕ ಸಾಧನೆ ಮಾಡದಿದ್ದರೆ ಮನಸ್ಸನ್ನು ಉನ್ನತ ಮಟ್ಟದಲ್ಲಿ ಹಿಡಿದಿಡುವುದು ಕಷ್ಟ''

ಬೋಶಿ ಹೇಳುತ್ತಿದ್ದರು, ''ಬ್ರಹ್ಮಾನಂದರು ಎಂದೂ ನನಗೆ ಬಯ್ಯುತ್ತಿರಲಿಲ್ಲ. ಸ್ವಾಮಿ ಸದಾನಂದರ ಬಳಿಯೇ ನನ್ನ ಆ ಕರ್ಮ ಮುಗಿದು ಹೋಗಿತ್ತು.''

ಆ ದಿನಗಳನ್ನು ಬೋಶಿ ಎಂದೂ ಮರೆಯಲಾರರು. ಅದೆಲ್ಲಾ ನಿನ್ನೆ ಮೊನ್ನೆ ನಡೆದಂತೆ ಅವರ ಮನಸ್ಸಿನಲ್ಲಿ ಹಸಿರಾಗಿತ್ತು. ೧೯೨೨ರ ಏಪ್ರಿಲ್ ತಿಂಗಳ ಮೊದಲ ವಾರದಲ್ಲಿ ಒಂದು ದಿನ ಎದೆ ನಡುಗಿಸುವಂಥ ಸುದ್ದಿ ಬಂತು – ಸ್ವಾಮಿ ಬ್ರಹ್ಮಾನಂದರಿಗೆ ಕಾಲರಾ ಬಂದು ಬಲರಾಮ ಬಸುವಿನ ಮನೆಗೆ ಚಿಕಿತ್ಸೆಗೆಂದು ಬಂದಿದ್ದಾರೆ. ಬೋಶಿ ಕೂಡಲೇ ಅವರನ್ನು ಕಾಣಲು ಓಡಿದರು. ಕೋಣೆಯ ಬಾಗಿಲಿನ ಬಳಿ ಅವರು ಹೋಗಿ ನಿಂತಾಗ ಬ್ರಹ್ಮಾನಂದರು ಬಾಗಿಲಿನತ್ತ ಬೆನ್ನು ಮಾಡಿ ಮಲಗಿದ್ದುದು ಅವರ ಕಣ್ಣಿಗೆ ಬಿದ್ದಿತು. ಕೋಣೆಯ ತುಂಬ ಜನರಿದ್ದರು. ಆದರೂ ಬ್ರಹ್ಮಾನಂದರಿಗೆ ಬೋಶಿಯ ಉಪಸ್ಥಿತಿಯ ಅರಿವಾಯಿತು. ಅವರನ್ನು ಹತ್ತಿರ ಕರೆದು ಗಾಳಿ ಬೀಸುವಂತೆ ಹೇಳಿದರು. ಬೋಶಿ ಆ ದಿನ ಮನೆಗೆ ಹಿಂತಿರುಗಲಿಲ್ಲ. ತಮ್ಮ ಕೈಲಾದ ಸೇವೆ ಮಾಡಲಾರಂಭಿಸಿದರು. ಕೋಣೆಯಲ್ಲಿ ಯಾರೂ ಇಲ್ಲದ ಸಮಯವನ್ನು ನೋಡಿಕೊಂಡು ಸ್ವಾಮಿ ಬ್ರಹ್ಮಾನಂದರು ತಮಗೆ ಲಿಂಬೆಹಣ್ಣಿನ ಹುಳಿ ಪೆಪ್ಪರಮೆಂಟನ್ನು ತಂದುಕೊಡುವಂತೆ ಕೇಳಿಕೊಂಡರು. ಬೋಶಿ ಕಲ್ಕತ್ತದ ಅಂಗಡಿಗಳಿಗೆ ತಿರುಗಿ ಒಳ್ಳೆಯ ಗುಣಮಟ್ಟದ ಹುಳಿ ಪೆಪ್ಪರಮೆಂಟುಗಳನ್ನು ಕೊಂಡು ತಂದರು. ಬ್ರಹ್ಮಾನಂದರು ಚಿಕ್ಕ ಮಗುವಿನಂತೆ ಆನಂದ ವ್ಯಕ್ತಪಡಿಸಿ, ಕೂಡಲೇ ಒಂದನ್ನು ಎತ್ತಿ ಬಾಯಿಗೆ ಹಾಕಿಕೊಂಡು ಚಪ್ಪರಿಸಲಾರಂಭಿಸಿದರು.

ಆ ಸಮಯದಲ್ಲಿ ಒಳಗೆ ಬಂದ ಸೇವಕ ಸಂನ್ಯಾಸಿಯ ದೃಷ್ಟಿಗೆ ಇದು ಬಿದ್ದಿತು. ಡಾಕ್ಟರನ್ನು ಕೇಳದೆ ತಿನ್ನಲು ಕೊಟ್ಟಿದ್ದಕ್ಕೆ ಅವರು ಬೋಶಿಯನ್ನು ಬಯ್ಯಲಾರಂಭಿಸಿದರು. ಗಾಬರಿಗೊಂಡಿದ್ದ ಬ್ರಹ್ಮಾನಂದರು ಚಪ್ಪರಿಸುವುದನ್ನು ನಿಲ್ಲಿಸಿ, ಪೆಪ್ಪರಮೆಂಟನ್ನು ಬಾಯಿಯ



ಸ್ವಾಮಿ ಬ್ರಹ್ಮಾನಂದರು

ಒಂದು ಬದಿಯಲ್ಲಿ ಇಟ್ಟುಕೊಂಡರು. ಬೋಶಿ ಥಟ್ಟನೆ ಅವರ ಬಳಿ ಹೋಗಿ, ಅವರ ಬಾಯಿಗೆ ಬೆರಳು ಹಾಕಿ ಪೆಪ್ಪರುಮೆಂಟನ್ನು ಹೊರ ತೆಗೆದು ತಮ್ಮ ಬಾಯಿಗೆ ಹಾಕಿಕೊಂಡರು. ಆಗಿನ ಕಾಲದಲ್ಲಿ ಕಾಲರಾ ರೋಗಿಗಳು ಮುಟ್ಟಿದ್ದನ್ನು ಯಾರೂ ತಿನ್ನುತ್ತಿರಲಿಲ್ಲ. ಆದರೆ ಬೋಶಿಗೆ ಅದಾವುದರ ಪರಿವೆ ಇರಲಿಲ್ಲ. ''ಮಹಾರಾಜರಿಂದ ನನಗೆ ಸಿಕ್ಕ ಕೊನೆಯ ಪ್ರಸಾದವದು'' ಎಂದು ಧನ್ಯತೆಯಿಂದ ಅವರು ಹೇಳಿ ಕೊಳ್ಳುತ್ತಿದ್ದರು.

ಮಹಾಸಮಾಧಿಯ ಎರಡು ದಿನಗಳ ಮೊದಲು ಬ್ರಹ್ಮಾನಂದ ರಿಗೆ ಒಂದು ದಿವ್ಯಭಾವ ಬಂದಿತು. ಆಗ ನಡೆದ ಆ ಅದ್ಭುತ ಲೀಲೆಯ ಮೌನ ಸಾಕ್ಷಿಯಾಗುವ ಮಹಾಭಾಗ್ಯವಂತರಲ್ಲಿ ಒಬ್ಬರು ಬೋಶಿ ಸೇನ್. ತಮ್ಮ ಸ್ವಸ್ವರೂಪವೇನೆಂದು ಬ್ರಹ್ಮಾನಂದರು ವಿವಿಧ ರೀತಿಯಲ್ಲಿ ಸೂಚಿಸಲಾರಂಭಿಸಿದರು. ಅವರು ಮತ್ತೆ ರಾಖಾಲ ಬಾಲಕನಾದರು. ಸಖ ಕೃಷ್ಣನ ಕಾಲಿನ ಗೆಜ್ಜೆಯ ಶಬ್ದವನ್ನು ಕೇಳ ಲಾರಂಭಿಸಿದರು. ಆಧ್ಯಾತ್ಮಿಕ ತರಂಗಗಳಿಂದ ಆ ಕೋಣೆ ತುಂಬಿ ಹೋಯಿತು. ಯಾವ ಜನ್ಮದ ಸುಕೃತಿ ನನಗೆ ಭಾಗಿಯಾಗಬೇಕಾಗಿ ಬಂತು! ಒಂದು ಅದ್ಭುತ ಭಾವದಲ್ಲಿ ಬೋಶಿಯ ಮನಸ್ಸೂ ಪೂರ್ಣತೆ ಯನ್ನು ಅನುಭವಿಸುತ್ತಿತ್ತು. ಈ ಹಿಂದೆ ಸ್ವಾಮಿ ಬ್ರಹ್ಮಾನಂದರ ಅಂಗ ಮರ್ದನ ಮಾಡುವಾಗ ಅವರ ಕೈಗಳನ್ನು ಒತ್ತುವ ಸಮಯದಲ್ಲಿ ಅವರು ಥಟ್ಟನೆ ಬೋಶಿಯ ಹೆಬ್ಬೆರಳನ್ನು ತಮ್ಮ ಬೆರಳುಗಳಲ್ಲಿ ಒತ್ತಿ ಹಿಡಿಯುತ್ತಿದ್ದರು. ಆ ಹಿಡಿತದಲ್ಲಿ ಎಂಥ ಶಕ್ತಿಯಿತ್ತೆಂದರೆ ಬೋಶಿಗೆ ಆ ಹಿಡಿತದಿಂದ ಒದ್ದಾಡಿ ಬಿಡಿಸಿಕೊಳ್ಳಬೇಕಾಗುತ್ತಿತ್ತು. ಇದರಿಂದ ಬ್ರಹ್ಮಾನಂದರು ಪುಟ್ಟ ಹುಡುಗನಂತೆ ಆನಂದ ಪಡೆಯುತ್ತಿದ್ದರು. ಅವರ ಮಹಾಸಮಾಧಿಗೆ ಕೇವಲ ಒಂದು ಘಂಟೆ ಬಾಕಿಯಿದ್ದಾಗ ಅವರಿಗೆ ಹೊರಗಿನ ಪ್ರಜ್ಞೆ ಇರಲಿಲ್ಲ. ಇನ್ನೆಂದಿಗೂ ಅವರೊಂದಿಗೆ ಮೊದಲಿನಂತೆ ಒಡನಾಟ ಸಾಧ್ಯವಿಲ್ಲ ಎಂಬ ಮ್ಲಾನತೆ ಬೋಶಿ ಯನ್ನು ಆವರಿಸಿತು. ಅವರ ಪಕ್ಕದಲ್ಲಿ ಕುಳಿತು ಬೋಶಿ ನಿಧಾನವಾಗಿ ಅವರ ಕೈಯನ್ನು ಸವರಲಾರಂಭಿಸಿದರು. ಬೋಶಿಯ ಕೈ ಹೆಬ್ಬೆರ ಳನ್ನು ಬ್ರಹ್ಮಾನಂದರ ಕೈಬೆರಳುಗಳು ಒಂದೇ ಕ್ಷಣದಂತೆ ಒತ್ತಿ ಹಿಡಿ ದಿದ್ದವು...

ಇದೇ ರೀತಿ ಬೋಶಿ ಶ್ರೀಮಾತೆ ಶಾರದಾದೇವಿಯವರ ಕೃಪೆ ಯನ್ನೂ ಪಡೆದಿದ್ದರು. ಶ್ರೀಮಾತೆಯಿಂದ ನಮ್ರತೆಯ ಪಾಠವನ್ನು ಕಲಿತೆ ಎನ್ನುತ್ತಿದ್ದರು ಬೋಶಿ. ಒಮ್ಮೆ ಶ್ರೀಮಾತೆ ಪಲ್ಲಕ್ಕಿಯಲ್ಲಿ ಹೋಗುತ್ತಿರುವಾಗ ಬೋಶಿ ಸೇನ್ ಮುಂತಾದವರು ಪಲ್ಲಕ್ಕಿಯ ಹಿಂದೆ ಹಿಂದೆ ನಡೆಯುತ್ತಿದ್ದರು. ಇದ್ದಕ್ಕಿದ್ದಂತೆ ಪಲ್ಲಕ್ಕಿ ನಿಂತಿತು. ಶ್ರೀಮಾತೆ ಕೆಳಗಿಳಿದು ತಮ್ಮ ಹಳ್ಳಿಯ ಬೀದಿಯಲ್ಲಿ ಹೋಗುತ್ತಿದ್ದ ಒಬ್ಬರು ಹೆಂಗಸರನ್ನು ಕರೆದು ಮಾತನಾಡಿಸಿ, ನಂತರ ಆಕೆಯ ಕಾಲುಮುಟ್ಟಿ ನಮಸ್ಕರಿಸಿದರು. ಇದನ್ನು ಕಂಡು ಬೋಶಿ ಆಶ್ಚರ್ಯ ದಿಂದ ಆ ಹೆಂಗಸಿನ ಪರಿಚಯವನ್ನು ಕೇಳಿದರು. ಆಕೆ ಶ್ರೀಮಾತೆಯ ದೂರದ ಸಂಬಂಧಿಕಳು. ಅತ್ಯಂತ ಬಡವೆ. ವಯಸ್ಸಿನಲ್ಲಿ ತಮಗಿಂತ ಹಿರಿಯಳಾಗಿದ್ದರಿಂದ ತಮ್ಮ ತಾಯಿಗೆ ತೋರಿಸುವ ಗೌರವವನ್ನೇ ಶ್ರೀಮಾತೆ ಆಕೆಗೆ ತೋರಿಸಿದ್ದರು. ಈ ಘಟನೆ ಬೋಶಿಯ ಮೇಲೆ ಚಿರಕಾಲ ಪರಿಣಾಮ ಬೀರಿತ್ತು. ಶ್ರೀಮಾತೆ ಬೋಶಿಗೆ ಹೇಳಿದ್ದರು, ''ನಿನ್ನ ಭವಿಷ್ಯದ ಬಗ್ಗೆ ಏನೂ ಚಿಂತೆ ಮಾಡಬೇಡ. ನೀನು ನನ್ನನ್ನು ನೋಡಿರುವೆ, ಇನ್ನೇಕೆ ಚಿಂತೆ?'' ಸ್ವಾಮಿ ಸದಾನಂದರೂ ಹೇಳಿದ್ದರು, ''ಜೀವನದಲ್ಲಿ ಪಡೆಯಬೇಕಾಗಿದ್ದ ಬೈಗುಳಗಳೆಲ್ಲಾ ನಿನಗೆ ನನ್ನಿಂದ ಸಿಕ್ಕಿದೆ. ಇನ್ನು ಮುಂದೆ ನೀನು ಜನರಿಂದ ಕೇವಲ ಮೆಚ್ಚುಗೆ, ಹೊಗಳಿಕೆಗಳನ್ನೇ ಪಡೆಯುವೆ.'' ಈ ಎರಡು ಮಾತುಗಳ ಬಲವೇ ತನ್ನೆಲ್ಲಾ ಉನ್ನತಿಗೆ ಕಾರಣ ಎನ್ನುತ್ತಿದ್ದರು ಬೋಶಿ.

೧೯೨೦ರ ಫೆಬ್ರವರಿಯಲ್ಲಿ ಶ್ರೀಮಾತೆಯ ಆರೋಗ್ಯ ತೀರ ಹದ ಗೆಟ್ಟಿದ್ದನ್ನು ಕಂಡು ಅವರನ್ನು ಕಲ್ಕತ್ತಕ್ಕೆ ಕರೆತರಲು ಸ್ವಾಮಿ ಭೂಮಾ ನಂದ, ಆತ್ಮಪ್ರಕಾಶಾನಂದ ಮತ್ತು ಬೋಶಿಯವರನ್ನು ಸ್ವಾಮಿ ಶಾರದಾನಂದರು ಜಯರಾಂಬಾಟಿಗೆ ಕಳುಹಿಸಿದರು. ಇದೇ ಅವರ ಕೊನೆಯ ಪ್ರಯಾಣ. ರಸ್ತೆಯಲ್ಲಿ ವಿಷ್ಣುಪುರದ ಬೋಶಿಯ ಮನೆ ಯಲ್ಲಿ ವಿಶ್ರಾಂತಿ ತೆಗೆದುಕೊಂಡರು. ಆ ಮನೆಯ ವರಾಂಡದಲ್ಲಿ ಶ್ರೀಮಾತೆ ಇತರ ಮಹಿಳೆಯರ ಜೊತೆ ಊಟಕ್ಕೆ ಕುಳಿತಾಗ ಬೋಶಿ ಅವರ ಫೋಟೋವನ್ನು ತೆಗೆದರು. ಇದೇ ಶ್ರೀಮಾತೆ ಜೀವಿಸಿರುವಾಗ ತೆಗೆದ ಕೊನೆಯ ಫೋಟೋ. ಇದಾಗಿ ೫ ತಿಂಗಳಲ್ಲಿ ಶ್ರೀಮಾತೆ ಕಲ್ಕತ್ತ ದಲ್ಲಿ ಶರೀರತ್ಯಾಗ ಮಾಡಿದರು.

ಒಂದು ದಿನ ಬೋಶಿ ಬಾಗ್‌ಬಜಾರಿನ ರಸ್ತೆಯಲ್ಲಿ ಸ್ನೇಹಿತ ರೊಂದಿಗೆ ಮಾತನಾಡುತ್ತಾ ನಿಂತಿರುವಾಗ ದೂರದಲ್ಲಿ ಒಬ್ಬ ವ್ಯಕ್ತಿ ಅದೇ ರಸ್ತೆಯಲ್ಲಿ ಬರುತ್ತಿರುವುದು ಕಾಣಿಸಿತು. ರಸ್ತೆಯಲ್ಲಿ ಕೆಲವು ಜನ ಆ ಕಡೆಗೇ ನೋಡುತ್ತಾ ಗಿರೀಶ್‌ಘೋಷ್ ಎಂದು ಮಾತ ನಾಡಿಕೊಳ್ಳುವುದನ್ನು ಕೇಳಿ, ಬೋಶಿಯೂ ಆ ವ್ಯಕ್ತಿಯನ್ನು ಗಮನಿಸಿ ನೋಡಿದನು. ಗಿರೀಶ್‌ಘೋಷ್ ಅತ್ಯಂತ ದೊಡ್ಡ ನಾಟಕಕಾರನಾಗಿ ದ್ದರೂ ಯೌವನದಲ್ಲಿ ತನ್ನ ಸಂಯಮರಹಿತ ಜೀವನದಿಂದ ಕೆಟ್ಟ ಹೆಸರನ್ನು ಪಡೆದಿದ್ದನು. ಬೋಶಿ ಗಿರೀಶ್ ಹತ್ತಿರ ಬರುವ ಮೊದಲೇ ಅಲ್ಲಿಂದ ದೂರ ಸರಿದು ರಸ್ತೆಯ ಮತ್ತೊಂದು ಬದಿಗೆ ಹೊರಟು ಹೋದನು. ಮರುಕ್ಷಣವೇ ಅವರ ಅರಿವಿಗೆ ಬಂದಿತು, ಗಿರೀಶ್ ಘೋಷ್ ಶ್ರೀರಾಮಕೃಷ್ಣ ಪರಮಹಂಸರ ಅಪಾರ ಕೃಪೆಗೆ ಪಾತ್ರ ನಾದವನೆಂದು. ಕೂಡಲೇ ಬೋಶಿ ಗಿರೀಶನ ಬಳಿ ಓಡಿ ಆತನ ಕಾಲಿಗೆ ಬಿದ್ದು ನಮಸ್ಕರಿಸಿದರು. ಬಹು ಬೇಗ ಇಬ್ಬರ ನಡುವೆ ಆತ್ಮೀಯತೆ ಬೆಳೆಯಿತು. ಗಿರೀಶನ ಒಂದು ಮಾತನ್ನು ಬೋಶಿ ಆಗಾಗ ಹೇಳು ತ್ತಿದ್ದರು: ''ಜೀವನದಲ್ಲಿ ಒಳ್ಳೆಯದು ನಿನಗೆ ಭಗವಂತನ ಕೃಪೆ ಯಿಂದಲೇ ಸಿಗುತ್ತದೆ. ಸುಖ, ಶಾಂತಿಗಳು ನಿನ್ನ ಕೈ ಬಿಟ್ಟು ಹೋದಾ ಗಲೂ ಮರೆಯಬೇಡ. ಅದೂ ಆತನ ಕೃಪೆಯೇ.'' ಗಿರೀಶನ ಅಂತ ರಂಗದಿಂದ ಈ ಮಾತುಗಳು ಹೊರಬಂದಿದ್ದವು.

ಸ್ವಾಮಿ ಬ್ರಹ್ಮಾನಂದರು ಬೋಶಿಗೆ ಹೇಳಿದ್ದರು, ''ಬೋಶಿ, ನಿನಗೆ ಎಷ್ಟೇ ಕೆಲಸವಿದ್ದರೂ ಬೆಳಿಗ್ಗೆ ಮತ್ತು ಸಂಜೆ ಸರಿಯಾದ ಒಂದು ಸಮಯದಲ್ಲಿ ಎಲ್ಲಾ ಕೆಲಸಗಳನ್ನು ಬದಿಗೆ ಸರಿಸಿ, ಪ್ರಾರ್ಥನೆಗೆ ಕೂರುವುದನ್ನು ಅಭ್ಯಾಸಮಾಡು...'' ಬ್ರಹ್ಮಾನಂದರು ಬದುಕಿರು ವಾಗ ಬೋಶಿ ಎಂದೂ ಈ ಪ್ರಯತ್ನ ಮಾಡಲು ಹೋಗಿರಲಿಲ್ಲ. ೧೯೨೨ರಲ್ಲಿ ಅವರ ಶರೀರತ್ಯಾಗದ ನಂತರ ಬೋಶಿಯನ್ನು ಅಮೂಲ್ಯ ವಾದದನ್ನು ಕಳೆದುಕೊಂಡ ಶೂನ್ಯಭಾವ ಆವರಿಸಿತು. ಮನಸ್ಸಿನ ಶಾಂತಿಗಾಗಿ ಮಹಾರಾಜ್ ಕೊಟ್ಟ ಉಪದೇಶವನ್ನು ಪಾಲಿಸಲು ಅವರ ಮನಸ್ಸು ವ್ಯಾಕುಲಗೊಂಡಿತು. ಎಷ್ಟೇ ಕೆಲಸವಿರಲಿ, ಮನೆ ಯಲ್ಲಿ ತಮ್ಮನ್ನು ಕಾಣಲು ಸ್ನೇಹಿತರು, ವಿಜ್ಞಾನಿಗಳು ಯಾರೇ

ಬಂದಿರಲಿ, ಪೂಜೆಯ ಸಮಯ ಬಂತೆಂದರೆ ಬೋಶಿ ಎಲ್ಲವನ್ನೂ ಬಿಟ್ಟು ದೇವರಕೋಣೆಗೆ ಹೋಗಿ ಒಂದೆರಡು ಗಂಟೆಗಳು ಭಜನೆ, ಜಪ, ಧ್ಯಾನಗಳಲ್ಲಿ ಕಳೆಯುತ್ತಿದ್ದರು. ಈ ಅಭ್ಯಾಸ ೧೯೭೭ರಲ್ಲಿ ಅವರ ಶರೀರ ತ್ಯಾಗವಾಗುವವರೆಗೂ ಒಂದೇ ದಿನವೂ ನಿಲ್ಲದೆ ಮುಂದುವರಿಯಿತು.

### ಮಹನೀಯ

ಬೋಶಿ ಎಲೆಮರೆಯ ಹೂವಿನಂತಿದ್ದರೂ ಆದರ್ಶವೊಂದಕ್ಕೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡ ಅವರ ಜೀವನ, ಸುತಮುತ್ತಲಿನವರು ಮಾತ್ರವಲ್ಲ, ಬಹುದೂರದ ದೇಶಗಳ ಜನರನ್ನೂ ತನ್ನತ್ತ ಆಕರ್ಷಿಸುವ ಶಕ್ತಿಯನ್ನು ಹೊಂದಿತ್ತು. ಈ ಆಕರ್ಷಣೆ ಆಧ್ಯಾತ್ಮಿಕ ಆಕರ್ಷಣೆ; ತನ್ನದೆನ್ನುವುದನ್ನು ಶೂನ್ಯದಲ್ಲಿ ಲೀನವಾಗಿಸಿ ಪರರ ಒಳಿತಿಗಾಗಿ ಜೀವನವನ್ನು ಮುಡಿಪಾಗಿಟ್ಟ ಮಹನೀಯನ ಸಂಪರ್ಕವನ್ನು ಪಡೆಯುವ ಆಕರ್ಷಣೆ.

೧೯೪೫ರಲ್ಲಿ ಆಲ್ಮೋರಾದ ಜೈಲಿನಿಂದ ಬಿಡುಗಡೆ ಪಡೆದ ನಂತರ ಜವಹರಲಾಲ್ ನೆಹರುರವರು ಬೋಶಿಯ ಮನೆಗೆ ಬಂದು ಅವರ ಜೊತೆ ಊಟಮಾಡಿ, ವಿಶ್ರಮಿಸಿಕೊಂಡು ಹೋದರು. ಮುಂದೆ ಭಾರತದ ಪ್ರಧಾನಮಂತ್ರಿಯಾದ ಮೇಲೆಯೂ ನೆಹರು, ಹಿಮಾಲಯದ ದೂರದೂರದ ದುರ್ಗಮ ಜಾಗಗಳಲ್ಲಿರುವ ಹಳ್ಳಿಗಳ ಕೃಷಿಯ ಅಭಿವೃದ್ಧಿಯ ವಿಚಾರವಾಗಿ ಬೋಶಿ ಸೇನರ ಸಲಹೆಯನ್ನೂ, ಮಾರ್ಗದರ್ಶನವನ್ನೂ ಕೇಳುತ್ತಿದ್ದರು.

ರವೀಂದ್ರನಾಥ ಠಾಕೂರರು ೧೯೩೭ರಲ್ಲಿ ಬೋಶಿಯನ್ನು ಕಾಣಲು ಆಲ್ಮೋರಾಕ್ಕೆ ಬಂದರು. ತಾವು ಬರೆಯುತ್ತಿದ್ದ 'ವಿಶ್ವ ಪರಿಚಯ' ಎಂಬ ಪುಸ್ತಕದ ಪ್ರತಿಯನ್ನು ಬೋಶಿಗೆ ತೋರಿಸಿ ಅವರ ಅಭಿಪ್ರಾಯವನ್ನು ಪಡೆಯುವುದೇ ಕವಿಯ ಮುಖ್ಯ ಉದ್ದೇಶವಾಗಿತ್ತು. ಬೋಶಿಯೊಡನೆ ಕುಂದನ್ ಹೌಸ್‌ನಲ್ಲಿ ಒಂದು ವಾರ ನೆಲೆಸಿದ್ದರು. 'ವಿಶ್ವ ಪರಿಚಯ'ದಲ್ಲಿ ರವೀಂದ್ರನಾಥರು ಬರೆದಿದ್ದಾರೆ: ''ಆಲ್ಮೋರಾದ ಶಾಂತಿಮಯವಾದ ವಾತಾವರಣ ಈ ಪುಸ್ತಕವನ್ನು ಬೇಗ ಮುಗಿಸಲು ಸಹಾಯಕವಾಯಿತು. ನನ್ನ ಆತ್ಮೀಯ ಸ್ನೇಹಿತ ಬೋಶಿ ಪುಸ್ತಕವನ್ನು ಓದಿ ಮೆಚ್ಚಿದ್ದು ನನಗೆ ತುಂಬ ಪ್ರೇರಣೆಯನ್ನು, ಉತ್ಸಾಹವನ್ನು ಕೊಟ್ಟಿತು.''

ಗೋಧಿ ಬೆಳೆಯ ಅಭಿವೃದ್ಧಿಗೆ ದುಡಿಯುತ್ತಿದ್ದ ಎಂ.ಎಸ್. ಸ್ವಾಮಿನಾಥನ್ ಮತ್ತು ಕೆನಡಾದ ಕೃಷಿ ವಿಜ್ಞಾನಿ ಡಾ. ಗ್ಲೆನ್ ಆಂಡರ್ಸನ್ ೧೯೬೫ರಲ್ಲಿ ಆಲ್ಮೋರಾದಲ್ಲಿ ಬೋಶಿಸೇನರ ಮನೆಗೆ ಬಂದರು. ಬೋಶಿಯೂ ತಮಗೆ ಅತ್ಯಂತ ಪ್ರಿಯವಾದ ವಿಷಯವಾದ ಕೃಷಿಯ ಸಂಶೋಧನೆಯ ಬಗ್ಗೆ ಆನಂದದಿಂದ ಅವರೊಡನೆ ಮಾತುಕತೆಯಾಡಿದರು. ಸಂಜೆಯಾದಂತೆ ಬೋಶಿ ಅಂತರ್ಮುಖವಾಗತೊಡಗಿದರು. ಅವರು ಆಲೋಚನೆಯನ್ನು ಮಧ್ಯದಲ್ಲಿ ನಿಲ್ಲಿಸಿ ಮೇಲೆದ್ದರು. ಉಳಿದಿಬ್ಬರು ವಿಜ್ಞಾನಿಗಳು ಬೇಕಿದ್ದರೆ ತಮ್ಮ ಜೊತೆ ದೇವರ ಕೋಣೆಗೆ ಬರಬಹುದೆಂದು ತಿಳಿಸಿ, ತಾವು ದೇವರಕೋಣೆಯನ್ನು ಪ್ರವೇಶಿಸಿ ಜಪಧ್ಯಾನಗಳಲ್ಲಿ ತನ್ಮಯರಾಗಿ ಹೋದರು. ಒಂದು ಗಂಟೆಯ ನಂತರ ಬೋಶಿ ಎದ್ದು ಒಂದು ಡಬ್ಬಿಯನ್ನು ತಮ್ಮೆರಡೂ ಕೈಗಳಲ್ಲಿ ಜೋಪಾನವಾಗಿ ಎತ್ತಿಕೊಂಡು ಅದರಲ್ಲಿದ್ದ ಸ್ವಾಮಿ ವಿವೇಕಾನಂದರ ಕೂದಲನ್ನು ಇಬ್ಬರು ವಿಜ್ಞಾನಿಗಳ ತಲೆಗೆ ಮುಟ್ಟಿಸಿ, '' The wheat programme will be a great success'' ಎಂದು ಹೇಳಿದರು. ಎಂ.ಎಸ್.ಸ್ವಾಮಿನಾಥನ್ ತಮ್ಮೆಲ್ಲಾ ಸಮಯವನ್ನೂ ಶಕ್ತಿಯನ್ನೂ ಕೊಟ್ಟು ಗೋಧಿ ಬೆಳೆಯ ಅಭಿವೃದ್ಧಿಗೆ ಹೋರಾಡುತ್ತಿದ್ದರು. ಕೊನೆಗೊಮ್ಮೆ ಅವರು ಈ ಪ್ರಯತ್ನಕ್ಕೆ ಮಾನ್ಯತೆ ಕೊಟ್ಟು ಸರ್ಕಾರವೂ ಸಹಾಯ ಮಾಡಲು ಮುಂದೆ ಬಂದಿತು. ೧೯೬೮ರ ಜುಲೈ ತಿಂಗಳಲ್ಲಿ ಪ್ರಧಾನ ಮಂತ್ರಿ ಇಂದಿರಾಗಾಂಧಿ '**ಗೋಧಿ ಕ್ರಾಂತಿ**' ಎಂದು ಹೆಸರು ಕೊಟ್ಟು ಅಂಚೆಚೀಟಿಯನ್ನು ಹೊರಡಿಸಿದರು. ಈ ಎಲ್ಲಾ ವಿಷಯಗಳನ್ನು ಬೋಶಿಗೆ ತಿಳಿಸುತ್ತಾ ಪತ್ರದಲ್ಲಿ ಸ್ವಾಮಿನಾಥನ್ ಬರೆಯುತ್ತಾರೆ, ''೧೯೬೫ರ ಏಪ್ರಿಲ್ ತಿಂಗಳಲ್ಲಿ ನೀವು ನಮ್ಮನ್ನು ಆಶೀರ್ವದಿಸಿದಾಗ ಗೋಧಿಯ ಕ್ರಾಂತಿ ಆಧ್ಯಾತ್ಮಿಕ ಶಕ್ತಿಯನ್ನು ಪಡೆಯಿತು!'' ಡಾ.ಆಂಡರ್‌ಸನ್ ಕೂಡ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿ ಬೋಶಿಗೆ ಪತ್ರ ಬರೆದರು.


ಡಾ. ಎಂ.ಎಸ್.ಸ್ವಾಮಿನಾಥನ್

ವಿಖ್ಯಾತ ಲೇಖಕ ಸೋಮರ್‌ಸೆಟ್ ಮಾಮ್ (Somerset Maugham) ೧೯೩೮ ರಲ್ಲಿ ''Razor's Edge'' ಎಂಬ ಪುಸ್ತಕವನ್ನು ಬರೆಯುತ್ತಿರುವಾಗ ಭಾರತಕ್ಕೆ ಬಂದನು. ಭಗವಂತನಲ್ಲಿ ಸಂಪೂರ್ಣ ಶರಣಾದ ಮನುಷ್ಯನ ಬದುಕು ಹೇಗಿರುತ್ತದೆ, ಧ್ಯಾನದಲ್ಲಿ ಮನುಷ್ಯನ ಮನಸ್ಸು ಯಾವ ಸ್ಥಿತಿಯಲ್ಲಿರುತ್ತದೆ ಇತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು ಭಾರತವಲ್ಲದೆ ಇನ್ನಾವ ದೇಶದಲ್ಲಿ ಹುಡುಕಲು ಸಾಧ್ಯ? ಆತ ದಕ್ಷಿಣ ಭಾರತದಲ್ಲಿ ರಮಣ ಮಹರ್ಷಿಗಳ ಆಶ್ರಮದಲ್ಲಿಯೂ ಕೆಲವು ಕಾಲವಿದ್ದನು. ಕಲ್ಕತ್ತಕ್ಕೆ ಬಂದಾಗ ಬೋಶಿಸೇನನೊಂದಿಗೆ ಆತನಿಗೆ ಪರಿಚಯವಾಯಿತು. ಆತ ತನ್ನ ಒಂದು ಪುಸ್ತಕದಲ್ಲಿ, 'Points of View' ಎಂಬ ಪುಸ್ತಕದ 'The Saint' ಎಂಬ ಅಧ್ಯಾಯದಲ್ಲಿ ಬರೆಯುತ್ತಾನೆ: ''ಕಲ್ಕತ್ತದಲ್ಲಿ ಒಬ್ಬರು ಹೆಸರುವಾಸಿಯಾದ ಸಸ್ಯವಿಜ್ಞಾನಿಯೊಂದಿಗೆ ಪರಿಚಯವಾಯಿತು. ಅವರು ಪ್ರತಿದಿನ ಒಂದೆರಡು ಗಂಟೆಗಳ ಕಾಲ ಧ್ಯಾನ ಮಾಡುತ್ತಾರೆ. ನಾವು



ಸಾಮರ್‌ಸೆಟ್ ಮಾಮ್

ಸಮಾಧಿ ಸ್ಥಿತಿಯ ಬಗ್ಗೆ ಮಾತ ನಾಡುತ್ತಿರುವಾಗ ಅವರ ಅಮೆರಿಕನ್ ಪತ್ನಿ ಒಂದು ಘಟನೆಯನ್ನು ಹೇಳಿದರು. ಅವರಿಬ್ಬರೂ ಕಲ್ಕತ್ತದಿಂದ ದೂರದ ಒಂದು ಸ್ಥಳಕ್ಕೆ ರೈಲಿ ನಲ್ಲಿ ಹೋಗುತ್ತಿದ್ದರು. ಅವರು ಕುಳಿತ ಬೋಗಿ ಜನಗಳಿಂದ ತುಂಬಿ ಹೋಗಿತ್ತು. ಮಲಗಲೂ ಜಾಗವಿರಲಿಲ್ಲ. ರೈಲು ಹೊರಟೊಡನೆ ಬೋಶಿ ಸೇನ್ ಕಣ್ಣುಮುಚ್ಚಿ ಸ್ಥಿರವಾಗಿ ಕುಳಿತರು. ಮರುದಿನ ಬೆಳಿಗ್ಗೆ ಅವರು ಹೋಗಬೇಕಿದ್ದ ಊರು ಬರುವವರೆಗೂ ಅವರು ಅಲ್ಲಾಡಲಿಲ್ಲ. ಪ್ರತಿ ಸ್ಟೇಶನ್‌ನಲ್ಲಿಯೂ ಜನರು ಹತ್ತುತ್ತಿದ್ದರು, ಇಳಿಯು ತ್ತಿದ್ದರು. ವಿಪರೀತ ನೂಕುನುಗ್ಗಲು. ಇದರ ನಡುವೆ ಹರಟೆ, ಊಟ, ತಿಂಡಿ, ಮಕ್ಕಳ ಕಿರುಚಾಟ, ತಿಂಡಿ ಮಾರುವವರು ತಾರಕಸ್ವರದಲ್ಲಿ ಕೂಗುವುದು ಇತ್ಯಾದಿ ನಡೆಯು ತ್ತಲೇ ಇತ್ತು. ಅವರು ಕುಳಿತ ಬೆಂಚುಗಳು ಮರದವು. ಇಡೀ ರಾತ್ರಿ ಗೆರೆಟ್ರುಡ್ ಅತ್ಯಂತ ಕಷ್ಟಪಟ್ಟರು. ಸ್ವಲ್ಪ ಆರಾಮವಾಗಿ ಒರಗಿ ಕಾಲು ಚಾಚುವ ಉಪಾಯವೂ ಇರಲಿಲ್ಲ. ಬೆಳಗಿನ ಜಾವ ಅವರ ತಲೆ ಸಿಡಿಯಲಾರಂಭಿಸಿತು. ಶರೀರದ ಪ್ರತಿ ಮೂಳೆಗಳೂ ನೋಯು ತ್ತಿದ್ದವು. ಬೋಶಿಯಲ್ಲಿ ಯಾವ ಪರಿವರ್ತನೆಯೂ ಕಂಡು ಬರಲಿಲ್ಲ. ಮುಖದಲ್ಲಿ ಅದೇ ಪ್ರಸನ್ನತೆ, ಕಣ್ಣಿನಲ್ಲಿ ಆ ಚುರುಕು ಬುದ್ಧಿಯ ಹೊಳಪು ಹೇಗಿದ್ದವೋ ಹಾಗೇ ಇದ್ದವು.''

ಬೋಶಿ ಹಿಗ್ಗಿನ ಬುಗ್ಗೆಯಾಗಿದ್ದರು. ಅವರ ಬಳಿ ಹೋದ ಪ್ರತಿ ಯೊಬ್ಬರಿಗೂ ಈ ಆನಂದದ ಅನುಭವವಾಗುತ್ತಿತ್ತು. ಸ್ವಾಮಿ ಪ್ರಭವಾ ನಂದರು ಸೇಂಟ್ ಬಾರ್ಬರಾದಿಂದ (ಅಮೆರಿಕಾದಲ್ಲಿರುವ ಒಂದು ವೇದಾಂತ ಸೆಂಟರ್) ೧೧.೦೭.೧೯೫೪ರ ಪತ್ರದಲ್ಲಿ ಬೋಶಿಗೆ ತಿಳಿಸು ತ್ತಾರೆ, ''ನೀನು ಇಲ್ಲಿಗೆ ಬಂದಿದ್ದಾಗ ನಿನ್ನನ್ನು ಭೇಟಿ ಮಾಡಿದ ಪ್ರತಿ ಯೊಬ್ಬ ವ್ಯಕ್ತಿಯೂ ನಿನ್ನನ್ನು ಸ್ಮರಿಸಿಕೊಳ್ಳುತ್ತಿದ್ದಾರೆ. ನೀನು ಭಾರತಕ್ಕೆ ಹಿಂತಿರುಗಿದ ಮೇಲೆ ತೀರ ಹತ್ತಿರದವನೊಬ್ಬನನ್ನು ಕಳೆದುಕೊಂಡಂ ತಾಗಿದೆ. ನಿನ್ನ ಬಳಿ ಮಾತನಾಡಿ ಎಲ್ಲರೂ ಆನಂದವನ್ನು ಅನುಭವಿಸು ತ್ತಿದ್ದಾರೆ. ಈ ಮಾತನ್ನು ಒಬ್ಬಿಬ್ಬರಲ್ಲ , ಅನೇಕರು ನನ್ನ ಬಳಿ ಹೇಳಿ ಕೊಂಡರು. ಇದನ್ನು ಕೇಳಿ ನನಗೆ ತುಂಬ ಹೆಮ್ಮೆಯಾಯಿತು...''

ಬೋಶಿ ೮೦ ವರ್ಷಗಳು ಮೀರಿದ ಮೇಲೆಯೂ ಎಷ್ಟು ಉತ್ಸಾಹ ದಿಂದ ಇರುತ್ತಿದ್ದರೆಂದು ಅವರ ಜೊತೆ ಕೆಲ ದಿನಗಳು ನೆಲೆಸಿದ್ದ ಕೆನಡಾದ ವಿಜ್ಞಾನಿ ಗ್ಲೆನ್ ಆಂಡರ್‌ಸನ್ ಬರೆಯುತ್ತಾರೆ, ''...ಇಂಥ ತುಂಬುಜೀವನ ತುಂಬ ಕಡಿಮೆ ಜನರ ಅದೃಷ್ಟಕ್ಕೆ ಸಿಗುತ್ತದೆ. ಹವಾಲಾಬಾಗ್‌ನ ಜಮೀನಿಗೆ ಕರೆದುಕೊಂಡು ಹೋಗಿ ಅಲ್ಲಿ ಕೃಷಿಯ ಮೇಲಿನ ಸಂಶೋಧನೆ ಹೇಗೆ ನಡೆಯುತ್ತಿದೆ ಎಂದು ನನಗೆ ತೋರಿಸಿದರು. ಆ ವೃದ್ಧನ ಚಿರಯೌವನವನ್ನು ಕಂಡು ಇವರದ್ದು ಶ್ರೀಮಂತವಾದ ಪರಿಪೂರ್ಣ ಬದುಕು ಎಂದು ನನಗೆ ಅನ್ನಿಸಿತು.''

ತಮ್ಮ ಜೀವನದ ಆ ಕೊನೆಯ ವರ್ಷದಲ್ಲಿ ಬೋಶಿ ಮಾಡಿದ ಮತ್ತೊಂದು ಕೆಲಸವೆಂದರೆ ಆಲ್ಮೋರಾದಲ್ಲಿ ಯಾತ್ರಿಕರ ವಿಶ್ರಾಂತಿ ಗಾಗಿ ಒಂದು ವಿಶ್ರಾಂತಿ ಸ್ಥಾನವನ್ನು ನಿರ್ಮಿಸಿದ್ದು. ೧೮೯೦ರಲ್ಲಿ ಆಲ್ಮೋರಾಕ್ಕೆ ವಿವೇಕಾನಂದರು ಮೊದಲ ಬಾರಿ ಬಂದಿದ್ದಾಗ ಅವರ ಕೈಯಲ್ಲಿ ಒಂದು ಕಾಸೂ ಇರಲಿಲ್ಲ. ಆ ಗುಡ್ಡಗಾಡಿನಲ್ಲಿ ಬಹುದೂರ ನಡೆದೇ ಅವರು ಬಂದಿದ್ದರು. ಹಸಿವಿನಿಂದ ಏಳಲಾರದೆ ಮಲಗಿದ್ದ ಅವರನ್ನು ಕಂಡ ಒಬ್ಬ ಮುಸಲ್ಮಾನ ರೈತನು ತನ್ನ ಬಳಿ ಇದ್ದ ಸೌತೆಕಾಯಿಯನ್ನು ಅವರಿಗೆ ತಿನ್ನಿಸಿದನು. ಇದರಿಂದ ಚೇತರಿಸಿ ಕೊಂಡು ಅವರು ಪ್ರಯಾಣವನ್ನು ಮುಂದುವರಿಸಿದ್ದರು. ಇದೇ ಜಾಗದಲ್ಲಿ ಬೋಶಿ, 'ವಿವೇಕಾನಂದ ವಿಶ್ರಾಂತಿ ಸ್ಥಾನ'ವನ್ನು ನಿರ್ಮಿ ಸುವ ಯೋಜನೆ ಹಾಕಿಕೊಂಡರು. ಭಾರತದ ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿ 'ಅಂಕಲ್ ಬೋಶಿ' ಎಂದು ಸಂಬೋಧಿಸಿ ಬರೆದ ಪತ್ರದಲ್ಲಿ ಈ ಕೆಲಸಕ್ಕಾಗಿ ೧೦೦೦/- ರೂಗಳ ಡ್ರಾಫ್ಟ್ ಕಳುಹಿಸುವುದಾಗಿ ಬರೆಯುತ್ತಾರೆ. ೧೯೭೧ರಲ್ಲಿ ಈ ಕೆಲಸ ಮುಗಿ ಯಿತು. ಸ್ವಾಮೀಜಿಗೆ ಆ ದಿನ ಪ್ರಾಣದಾನ ಮಾಡಿದ್ದ ಆ ಮುಸಲ್ಮಾನ್ ರೈತನ ಮೊಮ್ಮಗನನ್ನೇ ಈ ವಿಶ್ರಾಂತಿ ಗೃಹದ ಮೇಲ್ವಿಚಾರಣೆಯ ಕೆಲಸಕ್ಕೆ ಸೇರಿಸಲಾಯಿತು.

### ತಾಯಿಯ ಕರೆ

ಶ್ರೀರಾಮಕೃಷ್ಣರು, ಶ್ರೀಮಾತೆ ಮತ್ತು ಸ್ವಾಮೀಜಿಯವರ ದರ್ಶನವಾಗದಿದ್ದರೆ ತಾವು ಶರೀರತ್ಯಾಗ ಮಾಡುವುದಿಲ್ಲ ಎಂದು ಬೋಶಿ ಹೇಳುತ್ತಿದ್ದರು. ಕೊನೆಯಲ್ಲಿ ದುರ್ಬಲರಾಗಿ ಹಾಸಿಗೆ ಹಿಡಿದ ಅವರನ್ನು ಗೆರ್‌ಟ್ರುಡ್, ರಾಣಿಖೇತ್ ಎಂಬ ಜಾಗದ ಆಸ್ಪತ್ರೆಗೆ ಕರೆದು ಕೊಂಡು ಹೋದರು. ಬೋಶಿಯ ಶರೀರ ತ್ಯಾಗದ ಹಿಂದಿನ ದಿನ ಗೆರೆಟ್ರುಡ್ ಅವರನ್ನು ಕೇಳಿದರು, ''ನಿಮಗೆ ಅವರ ದರ್ಶನ ಸಿಕ್ಕಿತೆ?'' ಬೋಶಿ 'ಇಲ್ಲ' ಎಂದು ತಲೆಯಾಡಿಸಿ ಸೂಚಿಸಿದರು. ಗೆರ್ ಟ್ರುಡ್ ನಿರಾತಂಕದಿಂದ ನಿಟ್ಟುಸಿರುಬಿಟ್ಟರು. ಹಾಗಿದ್ದರೆ ಕೊನೆ ಯಿನ್ನೂ ಬಂದಿಲ್ಲ. ನಿಶ್ಚಿಂತೆಯಾಯಿತು ಅವರಿಗೆ. ಆದರೆ ಮರುದಿನ ೩೧ನೇ ಆಗಸ್ಟ್ ೧೯೭೧ ರಲ್ಲಿ ನಿಧಾನವಾಗಿ ಅವರು ಕೋಮಾ ಸ್ಥಿತಿಗೆ ಜಾರಿದರು. ಆದರೆ ಆ ದಿನ ಬೆಳಿಗ್ಗೆ ೯.೪೫ಕ್ಕೆ ಇದ್ದಕ್ಕಿದ್ದಂತೆ ಅವರ ಕಣ್ಣುಗಳು ದೊಡ್ಡದಾಗಿ ತೆರೆದುಕೊಂಡವು. ಇಡಿಯ ಕೋಣೆಯ ನ್ನೊಮ್ಮೆ ವೀಕ್ಷಿಸಿ ಸ್ಪಷ್ಟವಾದ ಸ್ವರದಲ್ಲಿ, ''ಅಮ್ಮಾ, ನಾನು ಬಂದೆ'' ಎಂದು ಜೋರಾಗಿ ಹೇಳಿದರು. ಆ ಮಹಾನ್ ಜೀವ ಪೃಥ್ವಿಯ ಬಂಧನದಿಂದ ಬಿಡುಗಡೆ ಹೊಂದಿ, ಅನಂತದಲ್ಲಿ ಲೀನವಾಯಿತು.

*(ಮುಗಿಯಿತು)*



# ತನ್ಮೇ ಮನಃ ಶಿವಸಂಕಲ್ಪಮಸ್ತು

## ''ಸತ್ ಸಂಕಲ್ಪದ ಪರಿಣಾಮ''

**ವೆಂ. ಲಕ್ಷ್ಮೀಶ**

*ಶುಭದಿನದಂದು ಹೊಸ ಪ್ರೇರಣೆಯೊಂದಿಗೆ ಮಾಡುವ ಸಂಕಲ್ಪವು ಮಹತ್ತರ ಸಾಧನೆಗೆ ಕಾರಣವಾದ ಉದಾಹರಣೆಗಳನ್ನು ನಮ್ಮ ನಡುವೆ ನೋಡುತ್ತಿರುತ್ತೇವೆ. ನಮ್ಮ ಇಚ್ಛಾಶಕ್ತಿಗೂ ದೈವಕೃಪೆಯ ಬಲ ಅಗತ್ಯ ವೆಂಬುದನ್ನು ತೋರಿಸಿಕೊಡುವ ಒಂದು ಕಥೆ ಇಲ್ಲಿದೆ. ಲೇಖಕರು ಮೈಸೂರು ಆಶ್ರಮದ ಭಕ್ತರು ಹಾಗೂ 'ವಿವೇಕ ಪ್ರಭ'ದಲ್ಲಿ ಸ್ವಯಂಸೇವಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.*

ಶಿವನಾಗಪುರವೆಂಬ ಗ್ರಾಮದಲ್ಲಿ ತಾರಾಪ್ರಿಯನೆಂಬ ಒಬ್ಬ ದೈವಜ್ಞ ನಿದ್ದನು. ದೈವಭಕ್ತನಾದ ಅವನು ರುದ್ರದೇವತೆಯ ಆರಾಧಕ ನಾಗಿ ಪ್ರತಿದಿನವೂ ಭಕ್ತಿಯಿಂದ ರುದ್ರಪಾರಾಯಣವನ್ನು ಮಾಡು ತ್ತಿದ್ದನು. ಸುತ್ತಮುತ್ತಲಿನ ಗ್ರಾಮಗಳಿಂದಲೂ ಅನೇಕ ದೂರದ ಗ್ರಾಮಗಳಿಂದಲೂ ಜನರು ತಮ್ಮ ತಾಪತ್ರಯಗಳಿಗಾಗಿ, ಋಣ ಬಾಧೆಗಳ ನಿವಾರಣೆಗಾಗಿ ದೈವಜ್ಞನಿಂದ ಗ್ರಹಗತಿ ಹಾಗೂ ತಮ್ಮ ಜಾತಕಗಳನ್ನು ಪರಿಶೀಲನೆ ಮಾಡಿಸಿ ಪರಿಹಾರದ ಮಾರ್ಗಗಳನ್ನು ಪಡೆದು ಸುಖವಾಗಿದ್ದರು. ಶುಭಕಾರ್ಯಗಳಿಗೂ ದೈವಜ್ಞನು ಸೂಚಿಸಿದಂತೆ ದಿನ ನಕ್ಷತ್ರಗಳನ್ನು ಅನುಸರಿಸಿ ತಮ್ಮ ಕಾರ್ಯ ಗಳನ್ನು ಸಾಗಿಸುತ್ತಿದ್ದರು. ಹೀಗೆ ತಾರಾಪ್ರಿಯನು ಒಳ್ಳೆಯ ಜ್ಯೋತಿಷಿ ಎಂದು ಅನೇಕ ಗ್ರಾಮಗಳಲ್ಲಿ ಪ್ರಸಿದ್ಧನಾಗಿದ್ದನು. ಅವನ ಗುಣಾ ಕಾರ ಹಾಗೂ ದೃಗ್ಗಣಿತ ಜ್ಞಾನ ಅಪಾರ ಸಿದ್ಧಿಯನ್ನು ಪಡೆದಿತ್ತು. ಯಾವ ಸಂದರ್ಭದಲ್ಲೂ ಅವನ ಸಲಹೆಗಳು ಫಲಕಾರಿಯಾಗು ತ್ತಿದ್ದವು. ಆದ್ದರಿಂದ ಜನರೆಲ್ಲರೂ ದೈವಜ್ಞನನ್ನು ಸ್ಥಿರವಾಗಿ ನಂಬಿ ದ್ದರು. ಅವನು ಎಲ್ಲರ ಗೌರವಾದರಗಳಿಗೆ ಪಾತ್ರನಾಗಿದ್ದನು.

ಆ ಗ್ರಾಮದ ಸಮೀಪದಲ್ಲಿ ಬಸವನಪುರವೆಂಬ ಗ್ರಾಮ ವಿದ್ದಿತು. ಆ ಗ್ರಾಮದಲ್ಲಿ ನಾಗಯ್ಯನೆಂಬ ಬಡ ರೈತನಿದ್ದನು. ಅವನು ತನ್ನ ಬಳಿ ಇದ್ದ ಸ್ವಲ್ಪ ಉಳುವ ಭೂಮಿಯನ್ನು ಕೃಷಿ ಮಾಡಿಕೊಂಡು ಜೀವನ ನಡೆಸುತ್ತಿದ್ದನು. ಪ್ರತಿ ಸಾರಿಯೂ ಭೂಮಿಗೆ ಒಳ್ಳೆಯ ಗೊಬ್ಬರ, ಸರಿಯಾದ ಸಮಯದಲ್ಲಿ ನೀರನ್ನು ಹಾಯಿಸಿದರೂ ತಕ್ಕ ಇಳುವರಿ ಸಿಗುತ್ತಿರಲಿಲ್ಲ. ಅತ್ಯಂತ ಶ್ರಮ ಪಟ್ಟರೂ ಅದರಿಂದ ಬರುವ ಫಲ ಅವನ ಕುಟುಂಬದ ಊಟೋಪ ಚಾರ ಹಾಗೂ ವಸ್ತ್ರ, ಮಕ್ಕಳ ಪಾಲನೆಗೆ ಸಾಕಾಗುತ್ತಿರಲಿಲ್ಲ. ಹೀಗಾಗಿ ಅವನು ಋಣಬಾಧೆಯಿಂದ ಪರಿತಪಿಸುತ್ತಿದ್ದನು. ಮುಂದಿನ ದಿನಗಳ ಹಾಗೂ ಕಷ್ಟಗಳ, ಮಕ್ಕಳ ವಿದ್ಯಾಭ್ಯಾಸದ ಖರ್ಚಿನ ಚಿಂತೆ ಅವನನ್ನು ಬಹಳವಾಗಿ ಪೀಡಿಸುತ್ತಿತ್ತು. ಸ್ವಲ್ಪವೂ ಹಣ ಉಳಿಯುತ್ತಿರಲಿಲ್ಲ. ಹೀಗಾಗಿ ಅವನು ತನ್ನ ಮುಂದಿನ ದಿನಗಳ ಸಂಸಾರದ ನಿರ್ವಹಣೆಗಾಗಿ ಅನೇಕ ವಿಧವಾದ ಉಪಾಯ ಗಳನ್ನು ಚಿಂತಿಸುತ್ತಿದ್ದನು. ಅವನು ತನ್ನ ಗ್ರಾಮದ ಹಿರಿಯರ ಸಲಹೆಯಂತೆ ಶಿವನಾಗಪುರದ ದೈವಜ್ಞನನ್ನು ಕಂಡು ತನ್ನ ಸಮಸ್ಯೆ ಗಳಿಗೆ ಪರಿಹಾರವನ್ನು ಪಡೆಯಲು ಆ ಗ್ರಾಮಕ್ಕೆ ಬಂದನು.

ದೈವಜ್ಞ ತಾರಾಪ್ರಿಯನು ನಾಗಯ್ಯನ ಜಾತಕವನ್ನು ಸಂಪೂರ್ಣ ವಾಗಿ ಪರಿಶೀಲಿಸಿ, ಗ್ರಹಗತಿಗಳ ಫಲವನ್ನು ಅರಿತುಕೊಂಡನು. ಅದರಿಂದ ನಾಗಯ್ಯನ ಮರಣದ ಸಮಯವು ಬಂದಿದೆ ಮತ್ತು ಅವನ ಆಯಸ್ಸು ಮುಗಿದು, ಈ ರಾತ್ರಿ ಕಳೆಯುವುದೇ ಬಹಳ ಕಷ್ಟ ಎಂದು ತಿಳಿದನು. ಆದರೆ ಅದನ್ನು ನಾಗಯ್ಯನಿಗೆ ಹೇಗೆ ತಿಳಿಸುವುದು ಎಂದು ಚಿಂತಾಕ್ರಾಂತನಾದನು. ಆದರೂ ಮತ್ತೊಮ್ಮೆ ಪುನಃ ಜಾತಕವನ್ನು ಆಮೂಲಾಗ್ರವಾಗಿ ಪರಿಶೀಲಿಸಿದನು. ಆಗಲೂ ಅವನಿಗೆ ದೊರೆತದ್ದು ರೈತನ ಮರಣ ಆ ದಿನವೇ ಎಂದು. ಆಗ ದೈವಜ್ಞನು ರೈತನನ್ನು ಕುರಿತು ಹೀಗೆ ಹೇಳಿದನು: ''ನಿನ್ನ ಜಾತಕವನ್ನು ಶಿವನ ಬಳಿ ಇರಿಸಿ, ಪೂಜೆ ಮಾಡಿ, ನಂತರ ನಿನಗೆ ಪರಿಹಾರವನ್ನು ಸೂಚಿಸುವೆನು. ಆದ್ದರಿಂದ ನೀನು ನಾಳೆ ಬಂದು ನೋಡು.'' ರೈತ ನಾಗಯ್ಯನು, ''ಸ್ವಾಮಿ ಸರಿಯಾಗಿ ಪರಿಶೀಲಿಸಿ ನನಗೆ ಪೂರ್ಣ ಪರಿಹಾರವನ್ನು ಕಲ್ಪಿಸಬೇಕು'' ಎಂದು ವಿನಂತಿಸಿ, ತನ್ನ ಬಸವನಪುರ ಗ್ರಾಮಕ್ಕೆ ಹೊರಟನು.

ಆ ರೈತನು ಅರ್ಧದಾರಿ ಕ್ರಮಿಸಿದಾಗ ಅವನಿಗೆ ಆಯಾಸವೆನಿ ಸಿತು. ಮಾರ್ಗದ ಮಧ್ಯದಲ್ಲಿ ಒಂದು ಮರದ ನೆರಳಿನಲ್ಲಿ ಸ್ವಲ್ಪಕಾಲ ವಿಶ್ರಾಂತಿ ಪಡೆದನು. ಅಷ್ಟರಲ್ಲಿ ಅವನಿಗೆ ಸ್ವಲ್ಪ ನಿದ್ರೆ ಬಂದಿತು. ಅವನು ಎಚ್ಚರಗೊಂಡಾಗ ಆಕಾಶದಲ್ಲಿ ಕಪ್ಪು ಮೋಡ ಗಳು ಕಾಣಿಸಿದವು. ಮಳೆ ಬರಬಹುದೆಂಬ ಸಂಶಯದಿಂದ ಸ್ವಲ್ಪ ವೇಗವಾಗಿ ನಡೆಯಲು ಆರಂಭಿಸಿದನು. ಆದರೆ ಮಳೆ ಬಂದು ಬಿಟ್ಟಿತು. ಅವನು ತನ್ನ ನಡಿಗೆಯ ವೇಗವನ್ನು ಮತ್ತಷ್ಟು ಹೆಚ್ಚಿಸಿ ದನು. ಮಳೆಯ ರಭಸ ಅಧಿಕವಾಯಿತು. ಈ ಮಳೆಯಲ್ಲಿ ನಡಿಗೆ ಕಷ್ಟವೆಂದು ಚಿಂತಿಸಿ, ಆಸರೆಗೆ ಏನಾದರೂ ಸಿಗಬಹುದೇನೋ ಎಂದು ಸುತ್ತಲೂ ತೀಕ್ಷ್ಣವಾಗಿ ಅವಲೋಕಿಸಿದನು. ದೂರದಲ್ಲಿ ಒಂದು ಮುರಿದು ಬಿದ್ದ ಗೋಡೆ ಅವನಿಗೆ ಗೋಚರವಾಯಿತು. ಆ ಪಾಳು ಗೋಡೆಯ ಹತ್ತಿರ ಬರುವ ಸಮಯದಲ್ಲಿ ಕತ್ತಲೆ ಆವರಿಸಿತು. ಆ ಗೋಡೆಯ ಹಿಂಬದಿಯಲ್ಲಿ ಒಂದು ಪಾಳು ಮಂಟಪವಿದ್ದಿತು. ಅದರ ಮೇಲ್ಛಾವಣಿ ಶಿಥಿಲಗೊಂಡಿತ್ತು. ಅಲ್ಲಿ ಆ ರೈತ ಬಂದು ಮಳೆಯಿಂದ ರಕ್ಷಣೆ ಪಡೆದನು. ಮಳೆಯ ಆರ್ಭಟ ಹೆಚ್ಚಾಗಿ ಗುಡುಗು ಸಿಡಿಲು ಮಿಂಚಿನಿಂದ ಕೂಡಿತ್ತು. ಅವನು ಭಯಗ್ರಸ್ತನಾಗಿದ್ದನು. ಒಮ್ಮೆ ಮಿಂಚಿದಾಗ ಆ ಮಂಟ

ಪದ ಒಳಗಡೆ ಒಂದು ಪುರಾತನವಾದ ಶಿವಲಿಂಗ ಕಾಣಿಸಿತು. ಆಗ ಅವನಿಗನ್ನಿಸಿತು, ''ಅಯ್ಯೋ ಶಿವನೆ, ನಿನಗೇ ಈ ಗತಿಯಾದರೆ ನನ್ನ ಪಾಡೇನು?''

ಆ ಸಮಯದಲ್ಲಿ ಅವನು ಕಣ್ಣುಮುಚ್ಚಿ ಶಿವಪಂಚಾಕ್ಷರಿ ಧ್ಯಾನದಲ್ಲಿ ನಿರತನಾದನು. ಗುಡುಗು ಮಿಂಚಿನಿಂದ ಕೂಡಿದ ಮಳೆಯ ಶಬ್ದಗಳು ಅವನನ್ನು ವಿಚಲಿತನನ್ನಾಗಿ ಮಾಡಿದವು. ಅವನು ಆ ಧೂಳಿನಿಂದ ಆವೃತವಾದ ಶಿವಲಿಂಗದ ಬಗೆ ಯೋಚನೆಯನ್ನು ಮಾಡಲು ಆರಂಭಿಸಿ ಕಣ್ಣನ್ನು ಮುಚ್ಚಿಕೊಂಡನು.

''ಓ ಶಿವನೆ, ನಿನ್ನ ಕರುಣೆಯಿಂದ ಶ್ರಮಕ್ಕೆ ಅನುಗುಣವಾಗಿ ನನ್ನ ಭೂಮಿಯಲ್ಲಿ ಫಲ ದೊರೆತರೆ ಉಳಿದ ಹಣದಿಂದ ಈ ಶಿಥಿಲವಾಗಿರುವ ದೇವಾಲಯದ ಜೀರ್ಣೋದ್ಧಾರವನ್ನು ಮಾಡುವೆ. ಈ ದೇವಾಲಯದ ಗೋಪುರಗಳನ್ನು ಪುನರ್ನಿರ್ಮಾಣ ಮಾಡಿಸುವೆನು. ಸುತ್ತಲೂ ಪ್ರಾಕಾರವನ್ನು ನಿರ್ಮಿಸಿ ಅಂದವಾದ ಗರ್ಭಗುಡಿಯನ್ನು ಕಟ್ಟಿಸುವೆ. ಇದರ ಹೊರ ಆವರಣದ ಗೋಡೆಗಳನ್ನು ಭದ್ರವಾಗಿ ಕಟ್ಟಿಸುವೆ. ಗೋಡೆಯಲ್ಲಿ ಅನೇಕ ಪುರಾಣಗಳ ಕಥೆಗಳ ಚಿತ್ರಗಳನ್ನು, ವಿವಿಧ ದೇವರ ಮೂರ್ತಿಗಳನ್ನು ಶಿಲ್ಪಿಗಳ ಸಹಾಯದಿಂದ ಕೆತ್ತಿಸುವೆ. ನಿತ್ಯ ಪೂಜಾವಿಧಿ ಅಭಿಷೇಕ–ಉತ್ಸವಗಳನ್ನು ನಡೆಸಲು ಅನುಕೂಲವಾಗುವಂತೆ ಧನಸಂಗ್ರಹಣೆಯನ್ನು ಮಾಡುವೆ. ಬರುವ ಭಕ್ತಾದಿಗಳ ಸೇವೆ ಮಾಡಲು ಮತ್ತು ತಂಗಲು ಉಚಿತವಾದ ವಾಸ ಹಾಗೂ ಪ್ರಸಾದ ವಿತರಣೆಯನ್ನು ಮಾಡಲು ವ್ಯವಸ್ಥೆಯನ್ನು ಕಲ್ಪಿಸುವೆ. ಯಾವಾಗಲೂ ದೀಪೋತ್ಸವ ನಡೆಯುವಂತೆ ಪ್ರಯತ್ನವನ್ನು ಮಾಡುತ್ತೇನೆ – ಹೀಗೆ ಅವನು ಚಿಂತಿಸುತ್ತಿರಲು ಸಿಡಿಲು ಗುಡುಗು ಶಬ್ದಗಳುಂಟಾದವು. ಆಗ ಅವನು ಭಯದಿಂದ ಕಣ್ತೆರೆದನು. ಅವನ ಎದುರಿಗೆ ಒಂದು ದೊಡ್ಡ ಸರ್ಪ ಹೆಡೆ ಬಿಚ್ಚಿ ಬುಸುಗುಡುತ್ತಿತ್ತು. ಅವನು ಭಯದಿಂದ ಅಲ್ಲಿಂದ ವೇಗವಾಗಿ ಓಡಿದನು. ಮಳೆಯ ಹನಿ ಕಡಿಮೆಯಾಗಿ ಅವನು ಸರ್ಪವು ಹಿಂಬಾಲಿಸುತ್ತಿರಬೇಕೆಂದು ಹಿಂತಿರುಗಿ ನೋಡಿದನು. ಸ್ವಲ್ಪ ಸಮಯದ ನಂತರ ಮತ್ತೊಂದು ಶಬ್ದವು ಕೇಳಿಸಿತು. ಅವನು ಆಸರೆ ಪಡೆದಿದ್ದ ದೇವಸ್ಥಾನದ ಮೇಲ್ಛಾವಣಿ ಕುಸಿದು ಬಿದ್ದುದನ್ನು ಮಿಂಚಿನ ಬೆಳಕಿನಲ್ಲಿ ಕಂಡನು. ಆಗ ಅವನು ಶಿವನೇ ಸರ್ಪದ ರೂಪದಲ್ಲಿ ರಕ್ಷಿಸಿದನೆಂದು ತಿಳಿದು, ಶಿವನ ಧ್ಯಾನದಲ್ಲಿ ನಿರತನಾದನು. ಸಾಷ್ಟಾಂಗ ನಮಸ್ಕಾರ ಮಾಡಲು ನೆಲದ ತೇವ ಹಾಗೂ ಕೊಚ್ಚೆಯಿಂದ ಅವನಿಗೆ ಸಾಧ್ಯವಾಗುತ್ತಿಲ್ಲವೆಂದು ದುಃಖಿಸಿ, ಮತ್ತೊಮ್ಮೆ ಶಿವಲಿಂಗಕ್ಕೆ ಮನಸ್ಸಿನಲ್ಲೇ ಕೃತಜ್ಞತೆಯನ್ನರ್ಪಿಸುತ್ತಾ, ಶಿವನ ಸ್ಮರಣೆ ಮಾಡುತ್ತಾ ಅವನ ಗ್ರಾಮ ಬಸವನಪುರಕ್ಕೆ ಬಂದನು.

ದೈವಜ್ಞನ ಸೂಚನೆಯಂತೆ ನಾಗಯ್ಯನು ಮರುದಿನ ಆತನನ್ನು ನೋಡಲು ಶಿವನಾಗಪುರಕ್ಕೆ ಬಂದನು. ದೈವಜ್ಞನಿಗೆ ದೊಡ್ಡ ಆಘಾತವಾಯಿತು. ತನ್ನ ಚಿಂತನೆ, ರೈತನ ಜಾತಕದ ಗ್ರಹಗತಿ ಗಳ ಗುಣಾಕಾರ ಎಲ್ಲವೂ ಸುಳ್ಳಾಯಿತು. ಅವನ ಜೀವಮಾನ ದಲ್ಲೇ ಇದು ಪ್ರಥಮ ಸೋಲು. ಇನ್ನು ಮುಂದೆ ಈ ವೃತ್ತಿಯನ್ನು ಬಿಟ್ಟು ಬಿಡಬೇಕು. ಬೇರೆ ಏನಾದರೂ ಮಾಡಬೇಕು ಎಂಬ ಚಿಂತನೆ ದೈವಜ್ಞನಿಗೆ ಪ್ರಾರಂಭವಾಯಿತು. ಆಗ ತಾರಾಪ್ರಿಯನು ಮತ್ತೊಮ್ಮೆ ಶಿವನನ್ನು ಧ್ಯಾನಿಸಿ ಆ ರೈತನ ಜಾತಕ ಗ್ರಹಗತಿಗಳನ್ನು ಪರಿಶೀಲಿಸಿದನು. ಆದರೆ ಬಂದ ಫಲಿತಾಂಶ ಹಿಂದಿನ ದಿನ ಏನನ್ನು ಹೇಳಿದ್ದನೋ ಅದೇ, ರೈತನ ನಿಶ್ಚಿತ ಮರಣ. ಆದರೂ ನಾಗಯ್ಯನು ಜೀವಿಸಿದ್ದಾನೆ. ಇದು ಹೇಗೆ ಸಾಧ್ಯ? ದೈವಜ್ಞನು ಪುನಃ ಗೊಂದಲಕ್ಕೀಡಾದನು. ಅವನು ಧೃತಿಗೆಡದೆ ಮತ್ತೆ ಮತ್ತೆ ಅನೇಕ ಗ್ರಂಥಗಳನ್ನು ಪರಿಶೀಲಿಸಿದಾಗ ಗ್ರಂಥವೊಂದರಲ್ಲಿ ಹೀಗಿತ್ತು: ''ವ್ಯಕ್ತಿ ಮಾಡಿದ ಸತ್ಸಂಕಲ್ಪ ಹಾಗೂ ಸತ್‌ಚಿಂತನಾಧಾರೆಗಳು ಅವನನ್ನು ಕಷ್ಟಪರಂಪರೆಗಳಿಂದ, ಅಪಘಾತಗಳಿಂದ, ಹಾಗೂ ದುರ್ಮರಣದಿಂದ ರಕ್ಷಿಸುತ್ತದೆ.'' ಆಗ ತಾರಾಪ್ರಿಯನಿಗೆ ಉಪನಿಷತ್ ವಾಕ್ಯವೊಂದು ಸ್ಮರಣೆಗೆ ಬಂದಿತು: **ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತಃ ।** ತಾರಾಪ್ರಿಯನು ಆಗ ಮಹಾನ್ಯಾಸದಲ್ಲಿ ಬರುವ ಶಿವ ಸಂಕಲ್ಪಹೃದಯ ಪಾರಾಯಣವನ್ನು ಮಾಡಿದನು:

**ಪರಾತ್ಪರಮ್ ಬ್ರಹ್ಮ ತತ್ಪರಾತ್ಪರತೋ ಹರಿಃ**
**ಯತ್ಪರಾತ್ಪರತೋಧೀಶಮ್ ತನ್ಮೇ ಮನಃ ಶಿವಸಂಕಲ್ಪಮಸ್ತು ।**
**ಪರಾತ್ಪರತರಂ ಚೈವ ತತ್ಪರಾ ಚೈವ ಯತ್ಪರಮ್**
**ಯತ್ಪರಾತ್ಪರತೋ ಜ್ಞೇಯಮ್ ತನ್ಮೇ ಮನಃ ಶಿವಸಂಕಲ್ಪಮಸ್ತು॥**

ಹೀಗೆ ಜಪಿಸಿ ಆ ರೈತನನ್ನು ಕುರಿತು, ''ನಿನ್ನೆಯ ದಿನ ಇಲ್ಲಿಂದ ಹೊರಟು ನೀನು ಗ್ರಾಮವನ್ನು ಸೇರುವವರೆಗೆ ನಡೆದ ಘಟನೆಗಳನ್ನು ವಿವರವಾಗಿ ಹೇಳು'' ಎಂದನು. ಆಗ ಬಡ ರೈತನು ತಾರಾಪ್ರಿಯನಿಗೆ ಎಲ್ಲವನ್ನೂ ವಿವರಿಸಿ, ಪಾಳುಬಿದ್ದ ದೇವಾಲಯವನ್ನು ನಿರ್ಮಿಸುವ ತನ್ನ ಚಿಂತನಾಧಾರೆಯನ್ನೂ ತಿಳಿಸಿದನು. ಆಗ ತಾರಾಪ್ರಿಯನು, ''ನಿನ್ನೆಯ ದಿನ ನಿನ್ನ ಮರಣದ ವಿಷಯ ಜಾತಕದಲ್ಲಿದ್ದಿತು. ಅದನ್ನು ನಿನಗೆ ಹೇಳಲಾಗದೆ, 'ನಾಳೆ ಬಾ' ಎಂದು ಹೇಳಿದ್ದೆ. ನಿನ್ನ ಸತ್ಸಂಕಲ್ಪದಿಂದ ನೀನು ಮರಣದಿಂದ ಉಳಿದಿರುವೆ'' ಎಂದು ಹೇಳಿ ರೈತನಿಗೆ ಸೂಕ್ತವಾದ ಮಾರ್ಗದರ್ಶನ ಹಾಗೂ ಸಲಹೆಗಳನ್ನು ಕೊಟ್ಟನು.

ದೈವಜ್ಞನ ಸಲಹೆಯಂತೆ ನಾಗಯ್ಯನು ಕೃಷಿ ಮಾಡಿ, ದೇವತಾರಾಧನೆಯನ್ನು ಮಾಡುತ್ತಾ ಶೀಘ್ರವಾಗಿ ಧನಿಕನಾದನು. ಅವನು ತನ್ನ ಸತ್‌ಸಂಕಲ್ಪದಂತೆ ಆ ಶಿಥಿಲವಾಗಿದ್ದ ಶಿವಾಲಯವನ್ನು ಎಲ್ಲರ ಸಹಕಾರದಿಂದ ಪುನರ್ನಿರ್ಮಾಣ ಮಾಡಿದನು. ಶಿವನಿಗೆ ನಿತ್ಯ ಪೂಜಾವಿಧಿ, ಅಭಿಷೇಕ, ದೀಪೋತ್ಸವ ಹಾಗೂ ವಾರ್ಷಿಕ ಉತ್ಸವಗಳು, ಬರುವ ಭಕ್ತಾದಿಗಳಿಗೆ ಉಚಿತವಾದ ವಾಸದ ವ್ಯವಸ್ಥೆ – ಪ್ರಸಾದ ವಿತರಣೆ ಆರಂಭವಾಗಿ, ಆ ಗ್ರಾಮವು ಪವಿತ್ರ ಯಾತ್ರಾಸ್ಥಳವಾಯಿತು. ಆಗ ಎಲ್ಲರೂ ದೈವಜ್ಞನನ್ನು ಆದರ ಗೌರವಗಳಿಂದ ಬರಮಾಡಿಕೊಂಡು ಸನ್ಮಾನಿಸಿದರು.

ಆದ್ದರಿಂದ ಯಾವಾಗಲೂ ಸತ್‌ಸಂಕಲ್ಪ ಹಾಗೂ ಸತ್‌ಚಿಂತನಾಧಾರೆಗಳನ್ನು ಎಲ್ಲರೂ ಮಾಡಬೇಕು. ಕೆಲವು ವೇಳೆ ಕಾರ್ಯ ಸಿದ್ಧಿಯಾಗದಿದ್ದರೂ ಅವು ಮನಸ್ಸಿನಲ್ಲಿ ಬೀಜರೂಪವಾಗಿ ಹೃದಯಾಂತರಾಳವನ್ನು ಸೇರಿ ಶುಭಸಂದರ್ಭದಲ್ಲಿ ಫಲಕಾರಿಯಾಗುವುದರಲ್ಲಿ ಸಂದೇಹವಿಲ್ಲ ಎಂಬುದಕ್ಕೆ ಈ ಬಡ ರೈತ ನಾಗಯ್ಯನ ಉದಾಹರಣೆಯೇ ಸಾಕ್ಷಿ. 




**RAMAKRISHNA MISSION ASHRAMA**
FORT, BELGAUM - 590 016 KARNATAKA
Ph: (0831) 2432789, 2430789
E-mail:belgaum@rkmm.org

# ಒಂದು ಲಕ್ಷ ಜಪಯಜ್ಞ

## ಶ್ರೀರಾಮಕೃಷ್ಣರ ಭಕ್ತರಿಗೆ ಸಾಧನೆಗೆ ಒಂದು ಸದವಕಾಶ

ಆತ್ಮೀಯ ಭಕ್ತರೆ,

ಶ್ರೀರಾಮಕೃಷ್ಣರು ಭಗವತ್‌ಸಾಕ್ಷಾತ್ಕಾರಕ್ಕೆ ಈ ಮೂರು ಸಾಧನೆಗಳು ಅಗತ್ಯವೆಂದು ಮತ್ತೆ ಮತ್ತೆ ಹೇಳುತ್ತಾರೆ:



(೧) ನಿರ್ಜನ ಪ್ರದೇಶಕ್ಕೆ ಆಗಾಗ್ಗೆ ಹೋಗುವುದು
(೨) ಸತ್ಸಂಗ
(೩) ಭಗವನ್ನಾಮ ಸ್ಮರಣೆ

ಈ ಮೂರು ವಿಷಯಗಳನ್ನು ಗಮನದಲ್ಲಿಟ್ಟುಕೊಂಡು, ಭಕ್ತರಿಗೆ ಇಂತಹ ಸಾಧನೆಗೆ ಒಂದು ಸೂಕ್ತ ವಾತಾವರಣವನ್ನು ಒದಗಿಸಲು, **ಒಂದು ಲಕ್ಷ ಜಪ** ಮಾಡುವ ಐದು ದಿನಗಳ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

ಈ ಶಿಬಿರವು **2018ರ ಮಾರ್ಚ್ 07** ರಿಂದ **11**ರ ವರೆಗೆ ನಡೆಯುವುದು. ಶಿಬಿರದ ದಿನಗಳಲ್ಲಿ ಶಿಬಿರಾರ್ಥಿಗಳು ಕಡ್ಡಾಯವಾಗಿ ಆಶ್ರಮದ ವಸತಿಗೃಹದಲ್ಲೇ ಇರಬೇಕಾಗುತ್ತದೆ.

ಮಂತ್ರದೀಕ್ಷೆಯನ್ನು ಪಡೆದಿರುವ, ಸಾಧನೆಯನ್ನು ಗಂಭೀರವಾಗಿ ಪರಿಗಣಿಸಿರುವ, ಒಂದು ಲಕ್ಷ ಜಪ ಮಾಡುವ ಸಾಮರ್ಥ್ಯವನ್ನು ಹೊಂದಿರುವ ಬಗ್ಗೆ ವಿಶ್ವಾಸವನ್ನು ಹೊಂದಿರುವ ಭಕ್ತರು ತಮ್ಮ ಹೆಸರುಗಳನ್ನು ಆಶ್ರಮದ ಕಛೇರಿಯಲ್ಲಿ **ಫೆಬ್ರವರಿ 20, 2018ರ** ಒಳಗಾಗಿ ನೋಂದಾಯಿಸಬೇಕು. ಮೊದಲು ನೋಂದಾಯಿಸಿದವರಿಗೆ ಮೊದಲ ಆದ್ಯತೆ ನೀಡಲಾಗುವುದು.

ಹೆಚ್ಚಿನ ಮಾಹಿತಿಗಾಗಿ ಆಶ್ರಮವನ್ನು ಇ-ಮೇಲ್ ಅಥವಾ ದೂರವಾಣಿ ಮೂಲಕ ಸಂಪರ್ಕಿಸಬಹುದು.

ಭಗವತ್ಸೇವೆಯಲ್ಲಿ,

**ಸ್ವಾಮಿ ಆತ್ಮಪ್ರಾಣಾನಂದ**

(ಕಾರ್ಯದರ್ಶಿಗಳು)

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೧೩

**ಡಾ**ಕ್ಟರ್ ಕಂಜೀಲಾಲ್ ಕಲ್ಕತ್ತೆಗೆ ಹೊರಡುವ ದಿನ ಮಧ್ಯಾಹ್ನದ ಹೊತ್ತು ನನ್ನನ್ನು ಕರೆದು, ''ಬಾ ತಮ್ಮಾ, ಶ್ರೀಮಾತೆಯವರನ್ನು ಕಾಡಿಸೋಣ'' ಎಂದು ಅವರ ಕೋಣೆಗೆ ಕರೆದೊಯ್ದ. ಅವನು ಹೇಳತೊಡಗಿದ, ''ಅಮ್ಮಾ, ಠಾಕೂರರು ಆಟದಲ್ಲಿ 'ಅಜ್ಜಿಯನ್ನು ಮುಟ್ಟಿಬಿಡುವ' ವಿಚಾರ ಹೇಳುತ್ತಿದ್ದರು...'' ಅವನು ಇನ್ನೂ ಏನೋ ಹೇಳುತ್ತಿದ್ದ, ಅಷ್ಟರಲ್ಲಿ ಶ್ರೀಮಾತೆ, ''ಹೌದು ಮಗೂ, ನಿನಗೆ ಅದೆಲ್ಲ ಆಗಿಹೋಗಿದೆ. ನಿನಗೆ ಇನ್ನೇಕೆ ಚಿಂತೆ?'' ಎಂದು ಹೇಳತೊಡಗಿದರು.

ಡಾಕ್ಟರ್ : ''ಅಮ್ಮಾ, ನೀವು ಹೇಗೆ ದಯೆ ತೋರಿಸುತ್ತಿದ್ದೀರೋ, ಅದೇ ರೀತಿ ಮತ್ತೆ ಜಾರಿಕೊಳ್ಳುತ್ತೀರಿ. (ಅವರನ್ನು ಸ್ಪರ್ಶಿಸಿ) ಈಗ ನಿಮ್ಮ ಸ್ಪರ್ಶ ಮಾಡಿದ್ದೇನೆ. ಈ ಬಾರಿ ಹೇಳಿಬಿಡಿ, ನಾವೇನೂ ಚಿಂತೆ ಮಾಡಬೇಕಾಗಿಲ್ಲವೆ? ನಮ್ಮ ಉದ್ಧಾರವಾಗುವುದೆ?''

ಶ್ರೀಮಾತೆ : ''(ನಗುತ್ತ) ಹೌದು ಮಗೂ, ನಿಮ್ಮ ಭಾರವನ್ನು ಠಾಕೂರರು ಹೊತ್ತುಕೊಂಡಿದ್ದಾರೆ. ಇನ್ನು ನಿಮಗೆ ಚಿಂತೆಯೇಕೆ?''

ಡಾಕ್ಟರ್ : ''ಒಂದು ವೇಳೆ ನಾವು ಬಹಳ ಕೆಟ್ಟವರಾಗಿ ಹೋದರೆ?''

ಶ್ರೀಮಾತೆ : ''ಮಗು ಮಲ, ಮೂತ್ರದಲ್ಲಿ ಕೊಳೆ ಮಾಡಿಕೊಂಡುಬಿಟ್ಟರೆ ತಾಯಿ ಅದನ್ನು ತೊಳೆದು ಸ್ನಾನ ಮಾಡಿಸುತ್ತಾಳೆ!''

ಡಾಕ್ಟರ್ : ''ಹಾಗಾದರೆ ನಾವು ನಿಶ್ಚಿಂತೆಯಿಂದಿರಬೇಕೆ?''

ಶ್ರೀಮಾತೆ : ''ಹೌದು ಮಗೂ, ನೋಡಿಕೋ ಬೇಕಾದರೆ!''

ಡಾಕ್ಟರ್ ಶ್ರೀಮಾತೆಯವರಿಂದ ಮೂರು ಬಾರಿ ಆಣೆ ಮಾಡಿಸಿಕೊಂಡಲ್ಲದೆ ಬಿಡಲಿಲ್ಲ.

ಜ್ಞಾನೇಂದ್ರನಾಥ (ಡಾ.ಕಂಜೀಲಾಲ್) ಹೊರಟು ಹೋದ ಮೇಲೆ, ಕೆಲವು ದಿನಗಳ ನಂತರ ಶ್ರೀಮಾತೆಗೆ ಜ್ವರ ಬಂತು. ಮೊದಲ ಎರಡು ದಿನಗಳ ಜ್ವರವನ್ನು ಅವರು ಗಣನೆಗೆ ತೆಗೆದುಕೊಳ್ಳಲಿಲ್ಲ , ಆ ಕುರಿತು ಯಾರಿಗೂ ಹೇಳಲಿಲ್ಲ. ಮೂರನೇ ದಿನ ಅವರನ್ನು ಕಾಣದೆ, ಅವರ ಕೋಣೆಗೆ ಹೋಗಿ ನೋಡಿದೆ. ಮೈಮೇಲೆ ಕಂಬಳಿ ಹೊದ್ದುಕೊಂಡು ಶ್ರೀಮಾತೆ ಮಲಗಿದ್ದರು. ಅವರ ದೇಹ ತುಸು ಬೆಚ್ಚಗಿತ್ತು. ನಾಡಿ ಚಂಚಲವಾಗಿತ್ತು. ಅವರಿಗೆ ಚಳಿಯಾಗುತ್ತಿತ್ತು. ಅವರು ರಾಧುವಿಗೆ ಹೇಳಿದರು, ''ನನ್ನ ಹತ್ತಿರ



ಇದ್ದರೆ ನಿನಗೂ ಜ್ವರ ಬಂದೀತು. ಹೋಗು, ನಿನ್ನ ಬೋಳು ತಲೆ ತಾಯಿ[೧] ಬಳಿಗೆ ಹೋಗಮ್ಮಾ.''

ರಾಧುವಿನ ವಿಷಯವಾಗಿ ಇಲ್ಲಿಯವರೆಗೆ ನಾನು ಹೆಚ್ಚೇನೂ ಹೇಳಿಲ್ಲ. ರಾಧು ಶ್ರೀಮಾತೆಯವರ ಸಣ್ಣ ತಮ್ಮ ಅಭಯಕುಮಾರ ಹಾಗೂ ಹುಚ್ಚು ಮಾಮಿಯ (ಸಣ್ಣತ್ತೆ) ಮಗಳು. ತಂದೆ ಸಾಯುವಾಗ ಅವಳು ತಾಯಿ ಗರ್ಭದಲ್ಲಿದ್ದಳು. ಹೀಗಾಗಿ ಅವಳು ತಂದೆಯನ್ನು ನೋಡಲಿಲ್ಲ. ಅವಳ ಶೈಶವದಿಂದಲೇ, ಅಂದರೆ ಸಣ್ಣತ್ತೆ ಹುಚ್ಚಿಯಾದಾಗಿನಿಂದ ಶ್ರೀಮಾತೆ ಅವಳ ಲಾಲನೆ, ಪಾಲನೆಯ ಭಾರವನ್ನು ವಹಿಸಿಕೊಂಡರು. ಅವಳ ನಿಜವಾದ ಹೆಸರು ರಾಧಾರಾಣಿ. ಶ್ರೀಮಾತೆ ಹಾಗೂ ಸಣ್ಣತ್ತೆ ಅವಳನ್ನು 'ರಾಧು' ಅಥವಾ 'ರಾಧಿ' ಎಂದು ಕರೆಯುತ್ತಿದ್ದರು. ಠಾಕೂರ್ ಅಥವಾ ಶ್ರೀಮಾತೆ

೧ ರಾಧು ತನ್ನ ತಾಯಿಗೆ (ಸುರಬಾಲಾ) 'ಬೋಳು ತಲೆಯ ತಾಯಿ' (ಬಂಗಾಳಿಯಲ್ಲಿ 'ನೇಡಿ ಮಾ') ಎನ್ನುತ್ತಿದ್ದಳು. ಆಕೆ ಬಾಲವಿಧವೆ; ಸಂಪ್ರದಾಯದಂತೆ ತನ್ನ ಕೂದಲನ್ನು ಕತ್ತರಿಸಿ, ಚಿಕ್ಕದಾಗಿ ಮಾಡಿಕೊಂಡಿದ್ದಳು.

ಯವರಿಗೆ ಏನಾದರೊಂದು ಅವಲಂಬನೆಯಿಲ್ಲದಿದ್ದರೆ ಶರೀರವನ್ನು ಉಳಿಸಿಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ಶ್ರೀಮಾತೆಯವರ ವಿಷಯದಲ್ಲಿ ಈ ರಾಧು ಎಂಬುವಳು ಇಲ್ಲದಿದ್ದರೆ ಈ ಮರ್ತ್ಯಲೋಕದಲ್ಲಿ ಅಷ್ಟೊಂದು ದಿನ ಇರುತ್ತಿರಲಿಲ್ಲ. ರಾಧು ಕೂಡ ಮಗುವಾಗಿದ್ದ ಕಾಲದಿಂದಲೇ ತನ್ನನ್ನು ಲಾಲನೆ, ಪಾಲನೆ ಮಾಡಿದ್ದರಿಂದ ಶ್ರೀಮಾತೆಯವರನ್ನು 'ತಾಯಿ' ಎಂದೂ, ತನಗೆ ಜನ್ಮ ನೀಡಿದ ತಾಯಿಯನ್ನು 'ನೇಡಿ-ಮಾ' ಎಂದೂ ಕರೆಯುತ್ತಿದ್ದಳು.

ಅಂದು ಶ್ರೀಮಾತೆಯವರ ಜ್ವರ ಹೊತ್ತೇರಿದಂತೆಲ್ಲ ಹೆಚ್ಚುತ್ತ ಹೋಯಿತು. ಸಾಯಂಕಾಲದವರೆಗೂ ಅವರು ಕಂಬಳಿ ಹೊದ್ದು ಮಲಗಿಕೊಂಡಿದ್ದರು. ಇನ್ನೂ ಚಳಿ ಬಿಟ್ಟು ಹೋಗಲಿಲ್ಲ. ಬಹಳ ಸಲ ಹೇಳಿದರೂ ಅವರು ಇಡೀ ದಿನ ಏನನ್ನೂ ತಿನ್ನಲಿಲ್ಲ. ಬಹಳ ಸಲ ಅವರು ಆ ದಿನ ಯಾವ ತಿಥಿಯೆಂದು ಕೇಳಿದ್ದರು. ಅದಕ್ಕೆ 'ಏಕಾದಶಿ' ಎಂದು ಹೇಳಿದಾಗ, ''ಏಕಾದಶಿಯ ಜ್ವರವನ್ನು ಅನುಭವಿಸಿಯೇ ತೀರಬೇಕು'' ಎಂದರು.

ಸುಮಾರು ನಡುರಾತ್ರಿಯ ವೇಳೆಗೆ ಜ್ವರ ಭಯಂಕರವಾಗಿ ಬಿಟ್ಟಿತು. ನಾಡಿ ಹೊಡೆದುಕೊಳ್ಳುತ್ತಿತ್ತು. ಮೈಮೇಲೆ ಕೈಯನ್ನು ಇಡಲಾಗುತ್ತಿರಲಿಲ್ಲ. ಅಷ್ಟೊಂದು ಮೈ ಬಿಸಿಯಾಗಿಬಿಟ್ಟಿತು. ನನಗೆ ತುಂಬಾ ಚಿಂತೆಯಾಯಿತು. ಹಿಂದೆ ಕೆಲವು ಬಾರಿ ಶ್ರೀಮಾತೆಗೆ ಜ್ವರ ಬಂದಾಗ ನಾನು ನೋಡಿದ್ದೆ. ಆದರೆ ಇಷ್ಟು ಜೋರಾಗಿ ಬಂದದ್ದನ್ನು ನಾನು ಎಂದಿಗೂ ನೋಡಿರಲಿಲ್ಲ. ನನಗೆ ಭಯವಾಯಿತು. ಕಂಜೀಲಾಲನ ಬಳಿಗೆ ಹೋಗಿಬಿಡಲೇ ಎಂದು ಅನೇಕ ಸಲ ಆಲೋಚಿಸಿದೆ. ಅದೆಂಥ ಸ್ಥಳವೆಂದರೆ, ಅಲ್ಲಿ ಯಾವ ಡಾಕ್ಟರರೂ ಇಲ್ಲ. ಆನೂರಿನ ನಗೇನ್ ಡಾಕ್ಟರ್ ಕ್ಯಾಂಬೆಲ್ಲಿನ ಪರೀಕ್ಷೆ ಪಾಸು ಮಾಡಿದ್ದ ಡಾಕ್ಟರನೇ. ಆದರೆ ಅವನಲ್ಲಿ ಎರಡು ಮೂರು ಜ್ವರದ ಮಾತ್ರೆ ಹಾಗೂ ಕ್ವಿನಿನ್ ಮಿಕ್ಸ್‌ಚರ್ ಬಿಟ್ಟರೆ ಬೇರೆ ಯಾವ ಔಷಧವೂ ಇರಲಿಲ್ಲ. ಸಮೀಪದಲ್ಲಿ ಯಾವುದೇ ಆಸ್ಪತ್ರೆ ಕೂಡ ಇಲ್ಲ - ಅವನ ಮೂಲಕ ಔಷಧಿ ಬರೆಸಿಕೊಂಡು, ಔಷಧಿ ತರಬಹುದು ಎಂದರೆ. ಹಾಗಿದ್ದರೆ ಏನು ಮಾಡಲಿ? ಶರತ್ ಮಹಾರಾಜರಿಗೆ ತಂತಿ ಕಳಿಸಲೆ? ತಂತಿ ತಲುಪಲು ಹಾಗೂ ಅವರು ಡಾಕ್ಟರರನ್ನು ಕರೆತರಲು ಕೆಲವು ದಿನವಾದರೂ ಬೇಕಾದೀತು. ಹೀಗೆ ನಾನಾ ಬಗೆಯಲ್ಲಿ ಚಿಂತಿಸಿ, ಏನನ್ನೂ ನಿರ್ಧರಿಸಲಾಗದೆ, ಕಿಂಕರ್ತವ್ಯಮೂಢನಾಗಿ ಅಳತೊಡಗಿದೆ.

ರಾತ್ರಿ ಮೂರನೇ ಪ್ರಹರ ಕಳೆದಿರಬೇಕು. ಶ್ರೀಮಾತೆಯವರು ಅಸ್ಪಷ್ಟವಾಗಿ ಏನೋ ಒಂದೆರಡು ಶಬ್ದವನ್ನು ಉಚ್ಚರಿಸಿದರು. ಆದರೆ ಅವರು ಏನು ಹೇಳುತ್ತಿದ್ದಾರೆ ಎಂದು ಅರ್ಥವಾಗಲಿಲ್ಲ. ಅನಂತರ ಅವರು ಅಸ್ಪಷ್ಟವಾಗಿ ಆಡಿದ ಶಬ್ದಗಳು ಹೀಗಿದ್ದವು: ''ಹೋಗಬೇಕೇ? - ಬೇಡವೆ? ಯಾಕೆ? ರಾಧಿಗಾಗಿಯೆ? - ಆಗಲಿ, ಹಾಗೇ ಆಗಲಿ...'' ಈ ಶಬ್ದಗಳನ್ನೇ ಆಧರಿಸಿ ನಾನು ಮನಸ್ಸಿನಲ್ಲೇ ಏನೇನೋ ಕಲ್ಪಿಸಿಕೊಂಡೆ. ಈ ಮಾತುಗಳನ್ನು ಅವರು ಠಾಕೂರರೊಂದಿಗೆ ಆಡಿದರೆ?...

ರಾತ್ರಿ ಕಳೆಯುವಷ್ಟರಲ್ಲಿ ಶ್ರೀಮಾತೆಯವರ ಮೈಯಲ್ಲಿ ಬೆವರು ಕಾಣಿಸಿಕೊಂಡಿತು. ಬೆಳಗಿನ ಹೊತ್ತು ಒಂದೇ ಬಾರಿಗೆ ಜ್ವರ ಬಿಟ್ಟಿತು.

ಸಾಯಂಕಾಲ ಶ್ರೀಮಾತೆಗೆ ತುಸು ನೆಮ್ಮದಿಯೆನಿಸಿ, ಹಾಸಿಗೆಯಲ್ಲೇ ಕಾಲು ನೀಡಿ ಕುಳಿತು ಮಾತುಕತೆಯಾಡುತ್ತಿದ್ದರು. ಹಿಂದಿನ ರಾತ್ರಿ ಅವರು ಠಾಕೂರರೊಂದಿಗೆ ಏನೋ ಮಾತುಕತೆ ನಡೆಸಿದ್ದರೇ ಇಲ್ಲವೇ ಎಂದು ಕೇಳಿದಾಗ ಸರಿಯಾದ ಉತ್ತರ ಸಿಗಲಿಲ್ಲ. ಆಗ ಉತ್ತರಕ್ಕಾಗಿ ನಾನು ಪಟ್ಟು ಹಿಡಿದು ಕುಳಿತೆ, ನಮ್ಮನ್ನೆಲ್ಲ ಅವರು ಬಿಟ್ಟು ಹೋಗಬಾರದು ಎಂದು. ಕೊನೆಗೆ ಅವರು ಅದಕ್ಕೆ ಸಮ್ಮತಿಸಿದರು.

ಶ್ರೀಮಾತೆಗಾಗಿ ಕಲ್ಕತ್ತೆಯಲ್ಲಿ ಹೊಸ ಮನೆ ನಿರ್ಮಾಣವಾಗುತ್ತಿತ್ತು. ಅದು ಬಾಗ್‌ಬಜಾರಿನಲ್ಲಿ ಗೋಪಾಲಚಂದ್ರ ನಿಯೋಗಿ ಲೇನ್‌ನ ಮೇಲಿತ್ತು. ಆ ಜಾಗವನ್ನು ಕೇದಾರ್‌ದಾಸ್ ಅಥವಾ 'ಖೋಡಾ ಕೇದಾರ್'('ಕುಂಟ ಕೇದಾರ') ದಾನ ಮಾಡಿದ್ದ. ಕೆಳ ಅಂತಸ್ತಿಗೆ 'ಉದ್ಬೋಧನ ಕಾರ್ಯಾಲಯ'ವನ್ನು ವರ್ಗಾಯಿಸಲಾಯಿತು. ಮೇಲಂತಸ್ತಿನಲ್ಲಿ ಶ್ರೀಮಾತೆಯವರಿಗೆ ವಾಸ ಮಾಡಲು ವ್ಯವಸ್ಥೆ ಮಾಡಲಾಯಿತು. ಆ ಮನೆಯಲ್ಲಿ ಮೂರು ಅಂತಸ್ತುಗಳಿದ್ದವು. ಎರಡನೇ ಅಂತಸ್ತಿನಲ್ಲಿ ಠಾಕೂರರಿಗಾಗಿ (ಮಂದಿರಕ್ಕಾಗಿ) ಮೇಲ್ಕಟ್ಟನ್ನು ನಿರ್ಮಾಣ ಮಾಡಲಾಗಿತ್ತು. ಸೋದರಿ ನಿವೇದಿತಾ ತನ್ನ ಕೈಯಿಂದಲೇ ಈ ಮೇಲ್ಕಟ್ಟನ್ನು ತಯಾರುಮಾಡಿ, ರೇಷ್ಮೆ ವಸ್ತ್ರದಿಂದ ಮುಚ್ಚಿ, ಸುತ್ತಿ ಇಟ್ಟಳು. ಆ ಮನೆಯನ್ನು ದೇವಾಲಯವೆಂದು ಪರಿಗಣಿಸಿ ಕಾರ್ಪೊರೇಷನ್ ತೆರಿಗೆಯಿಂದ ವಿನಾಯಿತಿ ನೀಡಲಾಯಿತು. ಶ್ರೀಮಾತೆ ಅಲ್ಲಿಗೆ ಹೋಗಿ ವಾಸ ಮಾಡುವ ಸಲುವಾಗಿ ಇಷ್ಟೆಲ್ಲ ಕಾರ್ಯ ನಡೆಯಿತು. ಆದರೆ ಅವರು ಅಲ್ಲಿಗೆ ಹೋಗಲು ಇನ್ನಷ್ಟು ತಡ ಮಾಡುತ್ತಿದ್ದರು.

ಕೊನೆಗೆ ಸಾಕಷ್ಟು ಒತ್ತಾಯಿಸಿದ ನಂತರ ೧೩೧೬ನೇ (ಬಂಗಾಳಿ) ವರ್ಷದ ಜ್ಯೇಷ್ಠ ಮಾಸದ, ಒಂದು ಸಾಯಂಕಾಲ ಶ್ರೀಮಾತೆ ಅಲ್ಲಿಗೆ ಬಂದರು.[೨] ಶರತ್ ಮಹಾರಾಜರು ವ್ಯವಸ್ಥೆ ಮಾಡಿದಂತೆ, ಠಾಕೂರರ ದೇವಾಲಯದ ಪಕ್ಕದ ಕೋಣೆಯಲ್ಲಿ[೩] ಶ್ರೀಮಾತೆಗಾಗಿ ಒಂದು ಹೊಸ ಮಂಚವನ್ನು, ಹಾಗೂ ರಾಧುಗಾಗಿ ಅವರ ಪಕ್ಕದಲ್ಲೇ ಶ್ರೀಮಾತೆಯವರ ಒಂದು ಹಳೆಯ ಹಾಸಿಗೆಯನ್ನು ಸಿದ್ಧಗೊಳಿಸಲಾಗಿತ್ತು. ಅಲ್ಲೇ ಅವರು ವಾಸ ಮಾಡಲು ಕೋರಲಾಯಿತು. ಶ್ರೀಮಾತೆ ಬಂದು ಅದೆಲ್ಲವನ್ನೂ ನೋಡಿ,

---

೨ ಶ್ರೀಮಾತೆ ಕಲ್ಕತ್ತದ 'ಉದ್ಬೋಧನ'ದ ಮನೆಗೆ ಪದಾರ್ಪಣ ಮಾಡಿದುದು ೧೩೧೬ರ ಜ್ಯೇಷ್ಠ ಮಾಸದ ೯ನೇ ದಿನಾಂಕದಂದು, ಅಂದರೆ ಕ್ರಿ.ಶ. ೧೯೦೯ರ ಮೇ ೨೩ರಂದು. *(-ಸಂ.)*

೩ ಈಗಿನ ಠಾಕೂರರ ಅಡುಗೆಮನೆಯಲ್ಲಿ. *(-ಸಂ.)*

''ಏನು ಮಗೂ, ನಾನು ಠಾಕೂರರಿಗಿಂತ ಬೇರೆಯಾಗಿ ಇರಬೇಕೆ? ಇಲ್ಲಿ ನಾನು ಇರಲಾಗುವುದೆ?'' ಎಂದರು. ಅನಂತರ ಅವರ ಮಂಚ ಹಾಗೂ ಇನ್ನೊಂದು ಹಾಸಿಗೆಯನ್ನು ಸರಿಸಿ, ಠಾಕೂರರ ಕೋಣೆಯಲ್ಲೇ ಸಿದ್ಧಗೊಳಿಸಲಾಯಿತು. ಅಲ್ಲಿ ಅವರು ಮೊದಲಿನ ದಿನ ರಾತ್ರಿಯನ್ನು ಕಳೆದರು. ಅವರು ಸೊಳ್ಳೆಪರದೆ ಉಪಯೋಗಿಸ ಲಿಲ್ಲ. ಸಣ್ಣತ್ತೆ ಪಕ್ಕದ ಕೋಣೆಯಲ್ಲಿ[೪] ಕಳೆದರು.

ಮರುದಿನ ಬೆಳಿಗ್ಗೆ ಶ್ರೀಮಾತೆ, ''ನನಗೆ ಮಂಚದಲ್ಲಿ ಮಲ ಗಲು ಸಾಧ್ಯವಿಲ್ಲ. ರಾಧಿ ನನ್ನನ್ನು ಬಿಟ್ಟು ಮಲಗಲಾರಳು. ನನಗೂ ರಾಧಿಯನ್ನು ಬಿಟ್ಟು ಇರಲಾಗದು. ಈ ಮಂಚವನ್ನು ತೆಗೆದುಬಿಡು. ನಾನು ಹಳೆಯ ಹಾಸಿಗೆಯಲ್ಲೇ ಮಲಗುತ್ತೇನೆ '' ಎಂದರು. ಗಣೇಂದ್ರನಾಥ ಹೇಳಿದ, ''ಶರತ್ ಮಹಾರಾಜರು ನಿಮಗೋಸ್ಕರ ಹೊಸ ಮಂಚವನ್ನು ತಯಾರು ಮಾಡಿದ್ದಾರೆ.'' ಆದರೂ ಶ್ರೀಮಾತೆ ಒಪ್ಪಲಿಲ್ಲ. ಅವರೆಂದರು, ''ಇಲ್ಲ ಮಗೂ, ಮಂಚದಲ್ಲಿ ಮಲಗಿ ನನಗೆ ಅಭ್ಯಾಸವೆಲ್ಲಿ? ಅದನ್ನು ಹರಡಿ ಸಿದ್ಧ ಗೊಳಿಸಿದರು, ಸರಿ . ನಿಮ್ಮ ಮಾತಿನಂತೆ ಒಂದು ದಿನ ಅಲ್ಲಿ ಮಲ ಗಿದೆ. ಈಗ ನೀವು ಅದರ ಮೇಲೆ ಮಲಗಿ.'' ಅವರ ಬಯಕೆಯಂತೆ ಆ ಮಂಚವನ್ನು ಅಲ್ಲಿಂದ ತೆಗೆಯಲಾಯತು. ಗಣೇಂದ್ರನಾಥ ಆ ಮಂಚವನ್ನು ಮೂರನೇ ಅಂತಸ್ತಿನಲ್ಲಿದ್ದ ಒಂದು ಕೋಣೆಗೆ ಕೊಂಡೊಯ್ದು, ಅದನ್ನು ಉಪಯೋಗಿಸುತ್ತಿದ್ದ. ಶ್ರೀಮಾತೆ ಹಾಗೂ ರಾಧುವಿಗೋಸ್ಕರ ಹಳೆಯ ಹಾಸಿಗೆಯನ್ನೇ ಸಿದ್ಧಗೊಳಿಸಲಾ ಯಿತು. ಬಾಗಿಲಿಗೆ ಮೊಳೆ ಹೊಡೆದು, ಅದಕ್ಕೆ ಸೊಳ್ಳೆ ಪರದೆ ಕಟ್ಟಿದರು.

ಶ್ರೀಠಾಕೂರರ ಪೂಜೆಗಾಗಿ ಶ್ರೀಮಾತೆಗೆ ಕಿರಣಚಂದ್ರ ದತ್ತನ ಹೂದೋಟದಿಂದ ಮಾಲಿ ಪ್ರತಿದಿನ ಬೆಳಗ್ಗೆ ಹೂಗಳನ್ನು ತಂದು ಕೊಡುತ್ತಿದ್ದ. ಗೋಲಾಪ್ ಮಾ ಇನ್ನು ಮೇಲೆ 'ಉದ್ಬೋಧನ'ದಲ್ಲೇ ಇರತೊಡಗಿದಳು. ತನ್ನ ಮೊಮ್ಮಕ್ಕಳ ಕಡೆಯಿಂದ ಆಕೆಗೆ ಸಿಗುತ್ತಿದ್ದ ಅಲ್ಪ ಸ್ವಲ್ಪ ಹಣವನ್ನು ಆಕೆ ಶ್ರೀಮಾತೆಯವರ ಸಂಸಾರ ನಿರ್ವ ಹಣೆಗೆ ನೀಡಿ, ಅಲ್ಲೇ ಆಕೆ ಊಟ, ವಾಸ ಮಾಡತೊಡಗಿದಳು.

ಮೊದಲ ಎರಡು ಮೂರು ದಿನ ಆಕೆ ಸಣ್ಣತ್ತೆಯೊಂದಿಗೆ ಮಲಗಿಕೊಂಡಳು; ಅನಂತರ ಆಕೆ ಮೂರನೇ ಅಂತಸ್ತಿನ (ಗಣೇಂದ್ರನಾಥ ಮಲಗುತ್ತಿದ್ದ) ಕೋಣೆಯಲ್ಲಿ ಮಲಗತೊಡಗಿ ದರು. ಸಣ್ಣತ್ತೆಯ ಕೋಣೆಯಲ್ಲಿ ಶ್ರೀಮಾತೆ ಕುಳಿತು ಎಣ್ಣೆ ಹಚ್ಚಿ ಕೊಳ್ಳುತ್ತಿದ್ದರು, ಹಾಗೂ ತಾಂಬೂಲ ಸಿದ್ಧಗೊಳಿಸುತ್ತಿದ್ದರು. ಎರ ಡನೇ ಅಂತಸ್ತಿನ ದಕ್ಷಿಣ ಭಾಗದ ಕೋಣೆಗಳು ಪುರುಷ-ಭಕ್ತರ ಊಟೋಪಚಾರಕ್ಕಾಗಿ ಉಪಯೋಗಿಸಲ್ಪಡುತ್ತಿತ್ತು.[೫] ಸ್ತ್ರೀ-ಭಕ್ತೆ ಯರು ಸಣ್ಣತ್ತೆಯ ಕೋಣೆಯಲ್ಲಿ ಊಟ ಮಾಡುತ್ತಿದ್ದರು. ಶ್ರೀಮಾತೆ ಠಾಕೂರರ ಕೋಣೆಯಲ್ಲೇ ಊಟ ಮಾಡುತ್ತಿದ್ದರು. ಯೋಗಿನ್ ಮಾ ಎರಡು ಬಾರಿ ಬಂದು, ಅಡುಗೆ ಮನೆಯನ್ನು ತೆರೆದು, ತರಕಾರಿ ಹೆಚ್ಚಿಕೊಡುತ್ತಿದ್ದಳು.

ಒಂದು ದಿನ ಲಲಿತನು ಫೋನೋಗ್ರಾಫನ್ನು ತೆಗೆದುಕೊಂಡು ಬಂದು ಶ್ರೀಮಾತೆಗೆ ಅದನ್ನು ಹಾಕಿ ಕೇಳಿಸಿದ. ಅನಂತರ ರಾಧುವಿ ನೊಂದಿಗೆ ಮಾತನಾಡುತ್ತ, ಬಳಿಕ ಹೊರಡುವಾಗ ಅವಳಿಗೂ ಫೋನೋಗ್ರಾಫನ್ನು ಹಾಕಿ ಕೇಳಿಸಿದ.

ಒಂದು ದಿನ ರಾತ್ರಿ, ಊಟವಾದ ಮೇಲೆ, ಶ್ರೀರಾಮಕೃಷ್ಣರ ಶಿಷ್ಯರಾದ ಗೋಪಾಲ ದಾದಾ (ಸ್ವಾಮಿ ಅದ್ವೈತಾನಂದರು) ದೇಹತ್ಯಾಗ ಮಾಡಿದರು ಎಂಬುದಾಗಿ ಬೇಲೂರು ಮಠದಿಂದ ಸುದ್ದಿ ಬಂತು. ಅವರನ್ನು 'ಶ್ರೀರಾಮಕೃಷ್ಣ ವಚನವೇದ'ದಲ್ಲಿ ವೃದ್ಧ ಗೋಪಾಲ ('ಬೂಢೋ ಗೋಪಾಲ್') ಎಂದು ಕರೆಯ ಲಾಗಿದೆ.[೬] ಸುದ್ದಿ ತಿಳಿದ ಕೂಡಲೇ ಶರತ್ ಮಹಾರಾಜರು ಗಣೇಂದ್ರನಾಥನೊಂದಿಗೆ ಬೇಲೂರು ಮಠಕ್ಕೆ ಹೋದರು.

ಒಂದು ಸಲ ಕಿರಣಚಂದ್ರ ದತ್ತ ಕೀರ್ತನೆಯನ್ನು ಏರ್ಪಡಿಸಿ, ಶ್ರೀಮಾತೆ ಹಾಗೂ ಅನೇಕ ಮಂದಿ ಭಕ್ತ, ಭಕ್ತೆಯರನ್ನು ತನ್ನ ಮನೆಗೆ ಕರೆದುಕೊಂಡು ಹೋದ. ಕೀರ್ತನಕಾರನಾದ ಉಪೇಂದ್ರ ಮಿತ್ರ ಅಷ್ಟೊಂದು ಪ್ರಸಿದ್ಧನಲ್ಲದಿದ್ದರೂ, ತುಂಬ ಚೆನ್ನಾಗಿ ಕೀರ್ತನೆ ಗಳನ್ನು ಹಾಡುತ್ತಿದ್ದ. ಮಥುರೆಯಿಂದ ಆರಂಭವಾದ ವಿರಹದ ಕಥಾಭಾಗವನ್ನು ಹಾಡುತ್ತಿದ್ದ. ಆ ಹಾಡುಗಳನ್ನು ಕೇಳಿದಾಗ ನಿಜಕ್ಕೂ ಭಾವಾತಿರೇಕವುಂಟಾಗಬೇಕು. ಪರದೆಯ ಹಿಂದೆ ಶ್ರೀಮಾತೆ ಹಾಗೂ ಇತರ ಭಕ್ತೆಯರು ಕುಳಿತಿದ್ದರು. ಕೀರ್ತನೆ ಕೇಳುತ್ತ ಕೇಳುತ್ತ ಶ್ರೀಮಾತೆ ಅರ್ಧಬಾಹ್ಯಪ್ರಜ್ಞೆ ಕಳೆದುಕೊಂಡರು. ಆ ಸಮಯದಲ್ಲೇ ಯತೀಂದ್ರಬಾಬು ಕಲ್ಕತ್ತೆಯಲ್ಲಿ ಬೇರೆಲ್ಲಿಗೋ ಹೋಗಬೇಕಿತ್ತು . ಟ್ರೇನ್ ಬರುವ ಸಮಯವಾಗಿತ್ತು. ಕೀರ್ತನೆ ಯನ್ನು ಅಲ್ಲೇ ನಿಲ್ಲಿಸಿ, ಅವನು ಹೊರಟು ನಿಂತ. ಆಗ ಗೋಲಾಪ್ ಮಾ ಪರದೆಯೊಳಗಿನಿಂದ, 'ಮಿಲನದೊಂದಿಗೆ ಕೀರ್ತನೆ ಮುಗಿ ಸಲು ಶ್ರೀಮಾತೆ ಹೇಳುತ್ತಿದ್ದಾರೆ' ಎಂದಳು. ಯತೀಂದ್ರಬಾಬು ಒಂದು ಮಿಲನದ ಕೀರ್ತನೆಯನ್ನು ಹಾಡಿದ. ಮಿಲನಗೀತೆ ಎಷ್ಟೊಂದು ಮಧುರವಾಗಿತ್ತೆಂದರೆ, ಅದು ಕೇಳುಗರ ಅಂತರಂಗ ವನ್ನು ಕಲಕಿತು. ಯತೀಂದ್ರಬಾಬು ಶ್ರೀಮಾತೆಗೆ ಪ್ರಣಾಮ ಮಾಡಿ ಹೊರಟುಹೋದ. ಶ್ರೀಮಾತೆ ಸಂಪೂರ್ಣ ಬಾಹ್ಯಪ್ರಜ್ಞೆ ಕಳೆದುಕೊಂಡು ಕುಳಿತಿದ್ದರು. ಗೋಲಾಪ್ ಮಾಗೆ ಇದು ಗೊತ್ತಾಗಿ, ಯಾರಿಗೆ ಏನೂ ತಿಳಿಯದಂತೆ ಅವರನ್ನು ಹಿಡಿದು ಎಬ್ಬಿಸಿದರು; ಹೆಸರಿಗೆ ಮಾತ್ರ ಒಂದಿಷ್ಟು ತಿಂಡಿ ಕೊಡಿಸಿ, ಗಾಡಿಯಲ್ಲಿ ಕರೆದು ಕೊಂಡು ಹೋಗಲು ಎಬ್ಬಿಸಿದರು.

*(ಮುಂದುವರಿಯುವುದು)*

---

೪ ಈಗಿನ ಶ್ರೀಮಾತೆಯವರ ಕೋಣೆಯ ಎಡಭಾಗದಲ್ಲಿರುವ ಕೋಣೆ. *(-ಸಂ.)*

೫ ಶ್ರೀಮಾತೆಯವರ ಕೋಣೆಯ ಎದುರಿನ ಕೋಣೆ. ಸ್ವಾಮಿ ರಾಮಕೃಷ್ಣಾ ನಂದರು ಈ ಕೋಣೆಯಲ್ಲೇ ದೇಹತ್ಯಾಗ ಮಾಡಿದರು. *(-ಸಂ.)*

೬ ಕ್ರಿ.ಶ. ೧೯೦೯ರ ಡಿಸೆಂಬರ್ ೨೮ರಂದು ಸಾಯಂಕಾಲ ನಾಲ್ಕೂವರೆಯ ಹೊತ್ತಿಗೆ ಸ್ವಾಮಿ ಅದ್ವೈತಾನಂದರು ದೇಹತ್ಯಾಗ ಮಾಡಿದರು. *( -ಸಂ.)*




# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೧೪



ಕುಳಿತವರು: **ಮದರ್ ಸೇವಿಯರ್, ಸ್ವಾಮಿ ನಿರ್ಭಯಾನಂದ, ವಿರಜಾನಂದ, ವಿಮಲಾನಂದ, ಬ್ರಹ್ಮಚಾರಿ ಅಮೃತಾನಂದ.**
ನಿಂತವರು: **ಸ್ವಾಮಿ ಪ್ರಕಾಶಾನಂದ, ಸ್ವರೂಪಾನಂದ, ಸಚ್ಚಿದಾನಂದ.**

ಆ ವಯಸ್ಕ ದಂಪತಿಗಳೇ ಕ್ಯಾಪ್ಟನ್ ಹಾಗೂ ಮಿಸೆಸ್ ಸೇವಿಯರ್; ಸ್ವರೂಪರೇ ಸ್ವಾಮಿ ಸ್ವರೂಪಾನಂದರು. ಸ್ವಾಮೀಜಿಯವರ ನಿರ್ದೇಶನದ ಮೇರೆಗೆ ಹಿಮಾಲಯದಲ್ಲಿ ಒಂದು 'ಅದ್ವೈತ ಆಶ್ರಮ'ವನ್ನು ತೆರೆಯುವ ಸಂಕಲ್ಪವನ್ನು ಹೊತ್ತು ಈ ಮೂವರೂ ಕೆಲವು ತಿಂಗಳ ಹಿಂದೆಯೇ ಇಲ್ಲಿಗೆ ಬಂದು ನೆಲೆಸಿದ್ದರು. ಅಂದು ಸಂಜೆ ಬೇಲೂರು ಮಠದಿಂದ ಸಚ್ಚಿದಾನಂದ (ಬೂಢೋ ಬಾಬಾ), ಸ್ವಾಮಿ ವಿರಜಾನಂದ ಮತ್ತು ವಿಮಲಾನಂದರು ಬರುವವರಿದ್ದರು. ಪರ್ವತವನ್ನು ವೀಕ್ಷಿಸಲು ಇವರೊಂದಿಗೆ ಮತ್ತೊಬ್ಬ ತರುಣ ಸಂಗಾತಿ ಹರೇಂದ್ರನೂ (ನಾದು, ಸ್ವಾಮೀಜಿಯವರ ತಂಗಿಯ ಮಗ) ಬರಲಿದ್ದ. ಅವರೆಲ್ಲ ತಲುಪಬೇಕಿದ್ದ ಸಮಯವು ಕಳೆದು ಬಹಳ ಹೊತ್ತಾಗಿತ್ತು. ಅಪಾಯದ ಹಾದಿ, ಕ್ರೂರ ಮೃಗಗಳು ಓಡಾಡುವ ದಾರಿ, ಇದರ ಮೇಲೆ ಬಿರುಗಾಳಿ ಮಳೆಯೊಂದಿಗೆ ಕತ್ತಲು ಬೇರೆ ಕವಿದಿದೆ, ಆತಂಕದ ವಿಷಯವೇ. ಸ್ವಲ್ಪ ಹೊತ್ತಿನಲ್ಲೇ ಬೂಢೋಬಾಬಾ ಮತ್ತು ವಿಮಲಾನಂದರು ಬಂದು ತಲುಪಿದರು. ಅವರೊಂದಿಗೆ ಸರಕು–ಸಾಮಾನು ಹೊತ್ತಿದ್ದ ಕೂಲಿಗಳಿದ್ದರು. ಆದರೆ ವಿರಜಾನಂದ, ಮತ್ತು ಹರೇಂದ್ರರ ಪತ್ತೆ ಇಲ್ಲ. ಅವರ ಆತಂಕವನ್ನು ಗಮನಿಸಿದ ಬೂಢೋ ಬಾಬಾ ಚಿಂತೆಯ ಸ್ವರದಲ್ಲಿ, ''ಅವರಿಬ್ಬರೂ ಮುಂದೆ ಮುಂದೆಯೇ ಸಾಗುತ್ತಿದ್ದರು. ಅನಂತರ ನಾವಿಬ್ಬರೂ ಬಹಳ ಹಿಂದೆ ಉಳಿದೆವು. ಅವರು ನಮಗಾಗಿ ಲೋಹಾಘಾಟಿನಲ್ಲಿ[೧] ಕಾಯುತ್ತಿರುತ್ತಾರೆಂದು ಎಣಿಸಿದ್ದೆ. ಆದರೆ ಅಲ್ಲಿಯೂ ಅವರುಗಳನ್ನು ಕಾಣದೆ, ಮುಂದೆ ಬಂದಿರಬಹುದೆಂದು ಭಾವಿಸಿದ್ದೆ. ಈಗ ಅದೆಲ್ಲಿ ಹೋದರು? ದಾರಿ ತಪ್ಪಿತೋ, ಏನು ಕಥೆಯೋ?'' ಎಂದರು.

ಆ ರಾತ್ರಿ ಎಲ್ಲರೂ ಚಿಂತೆಯಲ್ಲೇ ಕಳೆದರು. ಮಾರನೇ ದಿನ ಬೆಳಗ್ಗೆ ಕಳೆದುಹೋದವರಿಬ್ಬರೂ ಹಾಜರಾದರು. ಅವರು ಲೋಹಾ

೧. ಮಾಯಾವತಿ ಅದ್ವೈತ ಆಶ್ರಮಕ್ಕೆ ಸಮೀಪದ ಒಂದು ಊರು.

ಘಾಟಿಗೆ ಬರುವಾಗ ದಾರಿ ತಪ್ಪಿದ್ದರಿಂದ ಬಹಳ ಸುತ್ತಾಡಿ ಅಲ್ಲಿಗೆ ಬರುವಷ್ಟರಲ್ಲಿ ರಾತ್ರಿಯಾಗಿಬಿಟ್ಟಿತ್ತು. ಆದ್ದರಿಂದ ಪ್ರಯಾಣ ಮುಂದುವರಿಸದೆ, ಲೋಹಾಘಾಟಿನಲ್ಲೇ ಒಬ್ಬ ಸಾಧುವಿನ ಆಶ್ರಮದಲ್ಲಿ ಆಶ್ರಯ ಪಡೆದಿದ್ದರು.

ಅದೇ ಹಿಮಾಲಯ — ಹನ್ನೊಂದು ವರ್ಷಗಳ ಹಿಂದೆ ಖಗೇನ್ ಮತ್ತು ಕಾಳೀಕೃಷ್ಣರಿಬ್ಬರೂ ಯೋಗಸಾಧನೆಗೆಂದು ಓಡಿ ಹೋಗಲು ಹವಣಿಸಿದ್ದು ಇದೇ ಹಿಮಾಲಯಕ್ಕೆ! ಆ ದಿನಗಳ ಕನಸು ಇಬ್ಬರಿಗೂ ನೆನಪಾಗುತ್ತಿತ್ತು. ಇಷ್ಟು ವರ್ಷಗಳ ನಂತರ ಇಂದು ಆ ಕನಸು ನನಸಾಗುತ್ತಿದೆ! ಈಗಲೂ ಅವರು ಯೋಗ ಸಾಧನೆಯನ್ನೇ ಮಾಡಲು ಬಂದಿದ್ದಾರೆ, ಆದರೆ ಕೇವಲ ಧ್ಯಾನ, ಯೋಗವೊಂದನ್ನೇ ಅಲ್ಲ, ಅದರೊಂದಿಗೆ ಶ್ರೀಗುರು ಇಚ್ಛಿಸಿದಂತಹ ಅನಲಸ ಕರ್ಮವ್ರತವನ್ನೂ ಸಹ ಕೈಗೊಳ್ಳಲು ಬಂದಿದ್ದಾರೆ. ಆ ಇಬ್ಬರೇ ಮತ್ತೆ ಒಂದೆಡೆ ಸೇರಿದ್ದಾರೆ! ಇದೊಂದು ಅಚ್ಚರಿಯ ಸಮಾಗಮ. ದಟ್ಟವಾದ ಅರಣ್ಯದಿಂದ ಆವೃತವಾಗಿರುವ ಈ ಪರ್ವತದಲ್ಲಿ ಆಶ್ರಮವನ್ನು ನಿರ್ಮಿಸಬೇಕಾಗಿದೆ. ಮುಖ್ಯವಾಗಿ, ಮಿಷನ್ನಿನ ಆಂಗ್ಲ ಪತ್ರಿಕೆಯಾದ **'ಪ್ರಬುದ್ಧ ಭಾರತ'**ದ ಸಂಪಾದನೆ, ಮುದ್ರಣ ಮತ್ತು ಪ್ರಕಾಶನ ಇಲ್ಲಿಂದಲೇ ಆರಂಭವಾಗಬೇಕಾಗಿದೆ. ಅದ್ವೈತ ವೇದಾಂತದ ಸಾಧನೆ ಮತ್ತು ಪ್ರಚಾರಕ್ಕೋಸ್ಕರ ಒಂದು ಆದರ್ಶ ಕೇಂದ್ರವನ್ನು ಸ್ಥಾಪಿಸಬೇಕೆಂಬ ಸ್ವಾಮೀಜಿಯವರ ಹೆಬ್ಬಯಕೆಯ ಸ್ವಪ್ನವನ್ನು ವಾಸ್ತವಗೊಳಿಸಲು ಬಂದಿರುವ ಪ್ರತಿಯೊಬ್ಬ ಕಾರ್ಯಕರ್ತನೂ ಹೃದಯದ ತುಂಬ ಉತ್ಸಾಹವನ್ನು ತುಂಬಿಕೊಂಡು ಕಾರ್ಯೋನ್ಮುಖನಾಗಿದ್ದಾನೆ. ಸ್ವಾಮಿ ವಿರಜಾನಂದರ ಸ್ಮೃತಿಯಲ್ಲಿ ಇದರ ವಿವರಣೆ ಹೀಗಿದೆ:

''ಆಗ ಎಲ್ಲರೂ ಕೆಳಗಿನ ಬಂಗಲೆಯಲ್ಲೇ ಇರುತ್ತಿದ್ದೆವು. ಕ್ಯಾಪ್ಟನ್ ಸೇವಿಯರ್ ಆಶ್ರಮದ ಮ್ಯಾನೇಜರ್ ಆಗಿದ್ದರು. ಖಗೇನನು ಸಹಾಯಕ ಮ್ಯಾನೇಜರ್, ಹಾಗೂ ಸ್ವರೂಪಾನಂದರು 'ಪ್ರಬುದ್ಧ ಭಾರತ'ದ ಸಂಪಾದಕರು. ಬೂರ್ಢೋ ಬಾಬಾ Construction(ಕಟ್ಟಡ ನಿರ್ಮಾಣ, ದುರಸ್ತಿ ಇತ್ಯಾದಿ) ಜವಾಬ್ದಾರಿ ವಹಿಸಿಕೊಂಡರು. ನನ್ನ ಕೆಲಸ P.W.D. ಡಿಪಾರ್ಟ್‌ಮೆಂಟ್ – ರಸ್ತೆ ಮಾಡುವುದು, ಕಾಡುಮೇಡನ್ನು ಚೊಕ್ಕಟಗೊಳಿಸುವುದು ಇತ್ಯಾದಿ.

''ಬೆಳಗ್ಗೆ ಎಲ್ಲರೂ ಚಹಾ ಕುಡಿದು ಕೊಡಲಿ, ಗುದ್ದಲಿ, ಮಚ್ಚು ಮುಂತಾದವುಗಳನ್ನು ತೆಗೆದುಕೊಂಡು ಹೊರಡುತ್ತಿದ್ದೆವು. ೨–೩ ಗಂಟೆಗಳ ಕಾಲ hard work (ಕಠಿಣ ಪರಿಶ್ರಮ) ನಡೆಯುತ್ತಿತ್ತು. ಅದರಿಂದಾಗಿ ಬಹಳ ಹಸಿವೆಯಾಗುತ್ತಿತ್ತು. ಮದರ್[೨] (ಆಶ್ರಮದಲ್ಲಿ ಎಲ್ಲರಿಗೂ ಮಾತೃಸದೃಶರಾದ ಮಿಸೆಸ್ ಸೇವಿಯರ್)ನ



**ಕ್ಯಾಪ್ಟನ್ ಸೇವಿಯರ್**

ಕಪಾಟಿನಿಂದ ಏನನ್ನಾದರೂ ಕದ್ದು ತಿಂದುಬಿಡುತ್ತಿದ್ದೆ. ಲೋಹಾಘಾಟೆಲ್ಲಾ ಆಗ ಕಾಡೇ; ಏನೂ ಲಭಿಸುತ್ತಿರಲಿಲ್ಲ. ಆದ್ದರಿಂದ ಆಹಾರದ ಅಭಾವವಿರುತ್ತಿತ್ತು. ಅದೇನೇ ಆಗಲಿ, ನಾವೆಲ್ಲ ತುಂಬ ಆನಂದದಿಂದಿದ್ದೆವು. ಯಾವ ಕಷ್ಟವೂ ಕಷ್ಟವೆಂದೆನಿಸುತ್ತಿರಲಿಲ್ಲ.''

ಕ್ಯಾಪ್ಟನ್ ಸೇವಿಯರ್ ಜೀವನವು ತಪೋಮಯವಾಗಿತ್ತು. ಅವರು ಗೋಪಿ ಬಣ್ಣದಲ್ಲಿ ಅದ್ದಿದ ನಸುಹಳದಿ ಬಟ್ಟೆಯನ್ನು ಪಂಚೆಯನ್ನಾಗಿ ಉಡುತ್ತಿದ್ದರು. ಆಶ್ರಮಕ್ಕಾಗಿ ತುಂಬ ಶ್ರಮಿಸುತ್ತಿದ್ದರು. ಹುಟ್ಟಿನಿಂದಲೂ ವೈಭೋಗದಲ್ಲಿ ಸುಖವಾಗಿ ಬೆಳೆದ ವಿದೇಶಿ ವ್ಯಕ್ತಿಯೊಬ್ಬರು ತಮ್ಮ ಇಳಿವಯಸ್ಸಿನಲ್ಲೂ ಭಾರತೀಯ ವಿಚಾರಧಾರೆ ಮತ್ತು ಜೀವನದ ರೀತಿಯನ್ನು ಒಗ್ಗಿಸಿಕೊಂಡು ಇಷ್ಟರಮಟ್ಟಿಗೆ ಪಾಲಿಸುತ್ತಿದ್ದುದನ್ನು ಮತ್ತು ಭಾರತೀಯರ ಸೇವೆಗಾಗಿ ಸ್ವ-ಇಚ್ಛೆಯಿಂದ ದಾರಿದ್ರ್ಯ, ಕಠೋರತೆಯನ್ನು ಸ್ವೀಕರಿಸಿದ್ದನ್ನು ಕಂಡು ಎಲ್ಲರಿಗೂ ವಿಸ್ಮಯವಾಗುತ್ತಿತ್ತು.

ಕ್ಯಾಪ್ಟನ್ ಸೇವಿಯರ್‌ಗೆ ಮೊದಲಿನಿಂದಲೂ ಉರಿಮೂತ್ರ ರೋಗವಿತ್ತು. ಆದರೆ ಅವರು ಅದಕ್ಕೆ ಅಷ್ಟೇನೂ ಗಮನವೀಯುತ್ತಿರಲಿಲ್ಲ. ಕ್ರಮೇಣ ಆ ರೋಗವು ಉಲ್ಬಣಿಸಿತು. ಆಲ್ಮೋರಕ್ಕೆ ಹೋಗಿ ಉತ್ತಮ ವೈದ್ಯರಲ್ಲಿ ಚಿಕಿತ್ಸೆ ಪಡೆಯಲು ಅವರನ್ನು ಎಷ್ಟು ಒತ್ತಾಯಿಸಿದರೂ ಒಪ್ಪಿಸಲಾಗಲಿಲ್ಲ. ಅವರು, ''ನಾನು ಜೀವನ

---

[೨] ಸ್ವಾಮೀಜಿಯವರು ಲಂಡನ್ನಿನಲ್ಲಿದ್ದಾಗ ಸೇವಿಯರ್ ದಂಪತಿಗಳು ಸ್ವಾಮೀಜಿಯವರ ಸಂಪರ್ಕಕ್ಕೆ ಬಂದು ವೇದಾಂತ ತತ್ತ್ವಗಳಿಂದ ಆಕರ್ಷಿತರಾಗಿ ಸ್ವಾಮೀಜಿಯವರ ಶಿಷ್ಯತ್ವವನ್ನು ಸ್ವೀಕರಿಸಿದರು. ಭಾರತದಲ್ಲಿ ಸ್ವಾಮೀಜಿಯವರ ಕಾರ್ಯೋದ್ದೇಶಗಳಲ್ಲಿ ನೆರವಾಗಲೋಸುಗ ಇಲ್ಲಿಗೆ ಬಂದರು. ಈ ದಂಪತಿಗಳಿಗೆ ಸಂತಾನವಿರಲಿಲ್ಲ. ಸ್ವಾಮೀಜಿಯವರು ಮಿಸೆಸ್ ಸೇವಿಯರನ್ನು mother (ತಾಯಿ) ಎಂದು ಸಂಬೋಧಿಸುತ್ತಿದ್ದರು. ಈಕೆಯಂತಹ ಧರ್ಮಿಷ್ಠರೂ, ಉದಾರ ಹೃದಯಿಯೂ, ಸೇವಾಪರಾಯಣೆಯರಾದ ಮಹಿಳೆಯರು ನಿಜಕ್ಕೂ ಅತ್ಯಂತ ವಿರಳ. ಆಶ್ರಮದಲ್ಲಿ ಎಲ್ಲರೂ ಇವರನ್ನು 'ಮದರ್' ಎಂದೂ ಕ್ಯಾಪ್ಟನ್ನರನ್ನು 'ಪಿತಾಜೀ' ಎಂದೂ ಕರೆಯುತ್ತಿದ್ದರು. ಕ್ಯಾಪ್ಟನ್ ಸಹ ಅತಿ ಸರಳರೂ, ಉದಾರಿಗಳೂ, ಸ್ವಾಮೀಜಿ ಮತ್ತು ಅವರ ಕಾರ್ಯಗಳಲ್ಲಿ ತುಂಬ ಆಸ್ಥೆಯುಳ್ಳವರೂ ಆಗಿದ್ದರು.

ದಲ್ಲಿ ಒಂದೇ ಕಡೆ ಆರು ತಿಂಗಳಿಗೂ ಹೆಚ್ಚು ಕಾಲ ಎಲ್ಲೂ ಇದ್ದದ್ದಿಲ್ಲ. 'ಏನಾದರಾಗಲಿ, ನಾನಂತೂ ಮಾಯಾವತಿಯನ್ನು ಬಿಟ್ಟು ಕದಲುವುದಿಲ್ಲ' ಎಂದು ಈ ಬಾರಿ ದೃಢ ಸಂಕಲ್ಪ ಮಾಡಿಕೊಂಡು ಬಂದಿದ್ದೇನೆ'' ಎಂದುಬಿಟ್ಟರು.

ದೇವರ ಇಚ್ಛೆಯಿದ್ದಂತಾಗಲಿ ಎಂದು ಕ್ಯಾಪ್ಟನ್ ಸೇವಿಯರ್ ಮೃತ್ಯುಶಯ್ಯೆಯಲ್ಲಿ ಮಲಗಿ ರೋಗದ ನೋವನ್ನು ನೀರವವಾಗಿ ಸಹಿಸುತ್ತಿದ್ದರು. ಅದೊಂದು ಹೃದಯವಿದ್ರಾವಕ ದೃಶ್ಯ! ಭಗವತ್ಸೇವೆಗೆಂದೇ ತನ್ನ ಜೀವನವನ್ನು ಮುಡಿಪಾಗಿಟ್ಟಿದ್ದ ಈ ಗೃಹಸ್ಥ-ಸಂನ್ಯಾಸಿಯು ಕೊನೆಗೆ ತನ್ನ ಪಂಚಭೌತಿಕ ಶರೀರವನ್ನು (ಅಕ್ಟೋಬರ್ ೨೮, ೧೯೦೦ರಲ್ಲಿ) ತ್ಯಜಿಸಿ ಪರಮಶಾಂತಿಯನ್ನೈದಿದರು. ಮೃತ್ಯುವಿನ ನಂತರ ತನ್ನ ದೇಹದ ಸಂಸ್ಕಾರವನ್ನು ಹಿಂದೂ ರೀತಿಯಲ್ಲಿ ಮಾಡಬೇಕೆಂಬುದು ಅವರ ಇಚ್ಛೆಯಾಗಿತ್ತು. ಅಂತೆಯೇ ಆಶ್ರಮಕ್ಕೆ ಸ್ವಲ್ಪ ದೂರದಲ್ಲಿ ಹರಿಯುತ್ತಿದ್ದ ಒಂದು ಝರಿಯ ತೀರದಲ್ಲಿ ಅವರ ಶರೀರಕ್ಕೆ ಅಗ್ನಿಸಂಸ್ಕಾರ ಮಾಡಲಾಯಿತು. ಸ್ವಾಮೀಜಿಯವರು ಈ ವೇಳೆಯಲ್ಲಿ ಈಜಿಪ್ಟ್ ದೇಶದಲ್ಲಿ ಪ್ರಯಾಣಿಸುತ್ತಿದ್ದರು. ಇದಕ್ಕಿದಂತೆಯೇ ಅವರ ಮನಸ್ಸಿಗೆ 'ಕ್ಯಾಪ್ಟನ್ ಸೇವಿಯರ್ ಇನ್ನಿಲ್ಲ' ಎಂದೆನಿಸಿತು. ಆದರೆ ಇದರ ಬಗ್ಗೆ ಯಾರಿಗೂ ಏನೂ ಹೇಳಲಿಲ್ಲ. ಇದಕ್ಕೂ ಹಿಂದೆ ಸ್ವಾಮೀಜಿಯವರು ಮಾತೃಭೂಮಿಗೆ ಹಿಂತಿರುಗಲು ತವಕಿಸುತ್ತಿದ್ದರು. ಹೀಗೆ ಅನ್ನಿಸತೊಡಗಿದ ಮೇಲಂತೂ ಹಿಂತಿರುಗಲು ತುಂಬ ವ್ಯಾಕುಲಿತರಾದರು. ಕೂಡಲೇ ಜಹಜು ಹಿಡಿದು ಬೊಂಬಾಯಿ ತಲುಪಿದರು. ಡಿಸೆಂಬರ್ ೯ರಂದು (೧೯೦೦) ಮಠಕ್ಕೆ ಬಂದಾಗ ಕ್ಯಾಪ್ಟನ್ ಸೇವಿಯರ್ ಇಹಲೋಕದಲ್ಲಿ ಇನ್ನಿಲ್ಲವೆಂಬ ಸುದ್ದಿ ಕೇಳಿ ಅವರಿಗೆ ಮರ್ಮಾಘಾತವಾಯಿತು.

ಡಿಸೆಂಬರ್ ೧೧ ರಂದು ಸ್ವಾಮೀಜಿಯವರು ಮಿಸ್ ಮ್ಯಾಕ್ಲಿಯಾಡ್‌ಗೆ ಬರೆದ ಪತ್ರದಲ್ಲಿ, ''ಅಯ್ಯೋ! ನಾನು ಅವಸರಪಟ್ಟು ಬಂದುದರಿಂದಲೂ ಏನೂ ಪ್ರಯೋಜನವಾಗಲಿಲ್ಲ. ಪಾಪ, ಕ್ಯಾಪ್ಟನ್ ಸೇವಿಯರ್ ಕೆಲವು ದಿನಗಳ ಹಿಂದೆಯೇ ದೇಹತ್ಯಾಗ ಮಾಡಿದ್ದಾರೆ. ಇಬ್ಬರು ಶ್ರೇಷ್ಠರಾದ ಆಂಗ್ಲರು (ಮೊದಲನೆಯವ ಮಿ. ಗುಡ್‌ವಿನ್) ನಮಗಾಗಿ - ಹಿಂದೂಗಳಿಗಾಗಿ ಜೀವನವನ್ನು ಸಮರ್ಪಿಸಿದ್ದಾರೆ. ಶಹೀದ್ (ಹುತಾತ್ಮರು) ಯಾರಾದರೂ ಇದ್ದಲ್ಲಿ ಅವರು ಇವರೇ'' ಎಂದಿದ್ದಾರೆ.

ಡಿಸೆಂಬರ್ ೨೬ ರಂದು ಮಿಸ್ ಮ್ಯಾಕ್ಲಿಯಾಡ್‌ಗೆ ಬರೆದ ಪತ್ರ ಹೀಗಿದೆ: ''ನಾನು ಇಲ್ಲಿಗೆ ಬಂದು ಸೇರುವಷ್ಟರಲ್ಲಿ ಪ್ರಿಯ ಸೇವಿಯರ್ ತೀರಿಹೋಗಿದ್ದರು. ಬ್ರಹ್ಮಚಾರಿಗಳು ವೇದಮಂತ್ರಗಳನ್ನು ಘೋಷಿಸುತ್ತಿದ್ದರು; ಬ್ರಾಹ್ಮಣರು ಅವರ ಪಾರ್ಥಿವ ಶರೀರವನ್ನು ಹಿಂದೂಗಳ ಪದ್ಧತಿಯಂತೆ ದೇಹವನ್ನು ಹಾರಗಳಿಂದ ಸಿಂಗರಿಸಿ, ಕುಟೀರದ ಹತ್ತಿರ ಹರಿಯುತ್ತಿದ್ದ ನದೀತೀರಕ್ಕೆ ಹೊತ್ತುಕೊಂಡು ಹೋಗಿ ದಹನ ಮಾಡಿದರು. ನಮ್ಮ ಮಹೋದ್ದೇಶಕ್ಕಾಗಿ ಈಗಾಗಲೇ ಎರಡು ಬಲಿಗಳಾದವು. ಈ ಮಹಾನ್ ತ್ಯಾಗದಿಂದ, ಪುರಾತನ ಇಂಗ್ಲೆಂಡ್ ಮತ್ತು ಅದರ ವೀರಸಂತತಿಯನ್ನು ನಾನು ಇನ್ನೂ ಹೆಚ್ಚಾಗಿ ಪ್ರೀತಿಸುವಂತಾಗಿದೆ. ಇಂಗ್ಲೆಂಡಿನ ಉತ್ಕೃಷ್ಟ ರಕ್ತವನ್ನು ಜಗನ್ಮಾತೆಯು ಭಾರತದ ಭವಿಷ್ಯತ್ತಿನ ಸಸಿಗೆ ಧಾರೆಯೆರೆಯುತ್ತಿರುವಳು. ಜಗನ್ಮಾತೆಗೆ ಜಯವಾಗಲಿ!''

ಮಾಯಾವತಿಗೆ ಹೋಗಿ ಶೋಕಾನ್ವಿತರಾದ ಮಿಸೆಸ್ ಸೇವಿಯರ್‌ರವರನ್ನು ಸಮಾಧಾನಪಡಿಸಿ ಸಾಂತ್ವನ ಹೇಳುವುದು ತಮ್ಮ ಕರ್ತವ್ಯವೆಂದು ಸ್ವಾಮೀಜಿ ಬಗೆದರು. ಅಲ್ಲದೆ, ಹೊಸದಾಗಿ ರೂಪುಗೊಂಡಿರುವ ಅದ್ವೈತ ಆಶ್ರಮವನ್ನು ನೋಡಿ ಬರಬೇಕೆಂಬ ಬಯಕೆಯೂ ಇತ್ತು. ಆದ್ದರಿಂದ ಕಾಠ್‌ಗೋದಾಮಿನ ಮೂಲಕ ಮಾಯಾವತಿಗೆ ಹೋಗುವುದೆಂದು ಸ್ವಾಮೀಜಿ ನಿರ್ಧರಿಸಿದರು. ಕಾಠ್‌ಗೋದಾಮಿನ ಸ್ಟೇಷನ್ನಿನಿಂದ ಮಾಯಾವತಿಗೆ ೬೫ ಮೈಲಿ ದೂರ. ಮಾಯಾವತಿಯಲ್ಲಿದ್ದ ಸ್ವರೂಪಾನಂದರಿಗೆ ೧೯೦೦ರ ಡಿಸೆಂಬರ್ ೨೯ರಂದು ಸ್ವಾಮೀಜಿ ಅಲ್ಲಿಗೆ ತಲುಪುವರೆಂಬ ಸುದ್ದಿ ತಿಳಿದಾಗ ಬಹಳ ತಡವಾಗಿತ್ತು. ದಂಡಿ ಮತ್ತು ಸಾಮಾನು ಹೊರುವ ಕೂಲಿಗಳನ್ನು ಗೊತ್ತುಮಾಡಲೂ ಕೂಡ ಸಮಯವಿರಲಿಲ್ಲ. ಹೀಗಾಗಿ ಸ್ವಾಮೀಜಿಯವರನ್ನು ಹೇಗೆ ಕರೆತರುವುದೆಂದು ಎಲ್ಲರಿಗೂ ಚಿಂತೆಯಾಯಿತು. ತಕ್ಷಣವೇ ಕಾಳೀಕೃಷ್ಣರು ಹಳ್ಳಿಹಳ್ಳಿಯನ್ನೂ ತಿರುಗಿ, ಕಾಡಿ-ಬೇಡಿ ಹೆಚ್ಚಿನ ಭಕ್ಷೀಸು ಕೊಡುವುದಾಗಿ ಮಾತುಕೊಟ್ಟು, ಅಗತ್ಯವಿರುವಷ್ಟು ಜನರನ್ನು ಕರೆದುಕೊಂಡು ಬಂದರು. ಅವರೊಂದಿಗೆ ಎರಡು ದಿನಗಳಲ್ಲಿ ೬೫ ಮೈಲಿಯ ದೂರವನ್ನು ಕ್ರಮಿಸಿ ೨೮ರ ರಾತ್ರಿ ೧೨ ಗಂಟೆಗೆ ಕಾಠ್‌ಗೋದಾಮನ್ನು ತಲುಪಿದರು. ಸ್ವಾಮೀಜಿಯವರ ರೈಲು ೨೯ರ ಬೆಳಗ್ಗೆ ೫ರ ಹೊತ್ತಿಗೆ ಬಂದಿತು. ಅವರೊಂದಿಗೆ ಸ್ವಾಮಿ ಶಿವಾನಂದರೂ ಸ್ವಾಮೀಜಿಯವರ ಶಿಷ್ಯರಾದ ಸ್ವಾಮಿ ಸದಾನಂದರೂ (ಗುಪ್ತ ಮಹಾರಾಜ್) ಇದ್ದರು. ಸ್ಟೇಷನ್ನಿನಲ್ಲಿ ಕಾಳೀಕೃಷ್ಣರನ್ನು ಕಂಡು ಸ್ವಾಮೀಜಿ ತುಂಬ ಖುಷಿಪಟ್ಟರು. ಸ್ವಾಮಿ ವಿರಜಾನಂದರು ಅಷ್ಟು ಕಡಿಮೆ ಸಮಯದಲ್ಲಿ ಹೇಗೆ ಕೂಲಿಗಳನ್ನು ಹೊಂದಿಸಿಕೊಂಡು ೬೫ ಮೈಲಿ ನಡೆದುಕೊಂಡು ಬಂದು ಸ್ಟೇಶನ್ ತಲುಪಿದರೆಂಬುದನ್ನು ಕೇಳಿ, ''ವ್ಹಾ! ನೀನಲ್ಲವೇ ನನ್ನ ನಿಜವಾದ ಶಿಷ್ಯ'' ಎಂದು ಆಹ್ಲಾದದಿಂದ ಶ್ಲಾಘಿಸಿದರು.

ಕಾಳೀಕೃಷ್ಣರು ತುಂಬ ಬಳಲಿದ್ದರಿಂದಲೂ, ತಮಗೂ ಜ್ವರ ಬಂದಂತಾದ್ದರಿಂದಲೂ ಸ್ವಾಮೀಜಿಯವರು ಕಾಠ್‌ಗೋದಾಮಿನಲ್ಲೇ ಒಂದು ದಿನ ವಿಶ್ರಮಿಸಲು ನಿರ್ಧರಿಸಿದರು. ಮಾರನೇ ದಿನ ಮುಂಜಾನೆಯೇ ಎಲ್ಲರೂ ಮಾಯಾವತಿಗೆ ಹೊರಟರು. ಇವರೊಂದಿಗೆ ಲಾಲಾ ಗೋವಿಂದಲಾಲ್ ಷಾ ಅವರೂ ಹೊರಟರು.[೩] ಸ್ವಾಮೀಜಿಯವರು ದಂಡಿಯಲ್ಲಿ ಪ್ರಯಾಣಿಸಿದರು. ಮೊದಲನೇ ದಿನ ೧೬ ಮೈಲಿ ಪ್ರಯಾಣ ಮಾಡಿ, 'ಧಾರಿ' ಪ್ರವಾಸ ಮಂದಿರ

೩. ಸ್ವಾಮೀಜಿಯವರಿಗೆ, ಇಷ್ಟು ಅಲ್ಪ ಸಮಯದಲ್ಲಿ ಮಾಯಾವತಿಯಿಂದ ಯಾರಾದರೂ ಬಂದು ತಮ್ಮನ್ನು ಎದುರುಗೊಳ್ಳಲು ಸಾಧ್ಯವೇ ಎಂಬ ಸಂಶಯವಿತ್ತು; ಆದ್ದರಿಂದ ಅವರು ಆಲ್ಮೋರಾದಲ್ಲಿದ್ದ ಭಕ್ತರಾದ ಬದರಿ ಷಾ ಅವರಿಗೂ ಸಹ ತಾವು ಕಾಠ್‌ಗೋದಾಮಿಗೆ ತಲುಪುವ ದಿನವನ್ನು

ದಲ್ಲಿ ರಾತ್ರಿಯನ್ನು ಕಳೆದರು. ಸ್ವಾಮೀಜಿಯವರಂತೂ ಪರ್ವತದ ಪ್ರಶಾಂತತೆಯಲ್ಲಿ ಮಗುವಿನಂತೆ ಹಿಗ್ಗಿದರು.

ಮಾರನೇ ದಿನ ಅವರು 'ಢಾರಿ'ಯಿಂದ ಎರಡು ಮೈಲಿ ಪ್ರಯಾಣಿಸುವಷ್ಟರಲ್ಲಿ ಮಳೆ-ಮಂಜು ಬೀಳಲಾರಂಭಿಸಿತು. ಸ್ವಾಮಿ ವಿರಜಾನಂದರು ಸ್ವಾಮೀಜಿಯವರ ಅತಿ ಸೂಕ್ಷ್ಮವಾದ ದೇಹಾರೋಗ್ಯವನ್ನು ನೆನೆದು ಚಿಂತಿತರಾದರು. ಇನ್ನೂ ೧೫ ಮೈಲಿ ಕ್ರಮಿಸಿದ ನಂತರವೇ ಪ್ರವಾಸಿ ಮಂದಿರ ಸಿಗುವುದಿತ್ತು. ಬಿರುಗಾಳಿ ಮಳೆಯಲ್ಲಿ ನಿಧಾನವಾಗಿ ನಡೆದು, ೩ ಗಂಟೆಯ ಅವಧಿಯಲ್ಲಿ ಕೇವಲ ಏಳು ಮೈಲಿ ಮಾತ್ರ ಕ್ರಮಿಸಿದರು. ಅಲ್ಲಿಯೇ ಒಂದು ಚಿಕ್ಕ ಚಹಾದ ಅಂಗಡಿಯಿತ್ತು. ದಂಡಿ ವಾಹಕರು ಚಹಾ-ತಂಬಾಕನ್ನು ಸೇವಿಸಲೆಂದು ದಂಡಿಯನ್ನು ಇಳಿಸಲು ಇಚ್ಛಿಸಿದರು. ಈ ಮೊದಲೇ ಸ್ವಾಮಿ ವಿರಜಾನಂದರು ಸ್ವಾಮೀಜಿಯವರಿಗೆ, 'ಈ ದಂಡಿ ವಾಹಕರು ಒಮ್ಮೆ ದಂಡಿಯನ್ನು ಹೆಗಲಿನಿಂದಿಳಿಸಿದರೆ ಮತ್ತೆ ಬಡಪೆಟ್ಟಿಗೆ ಅದನ್ನು ಹೆಗಲಿಗೇರಿಸರು. ಆದ್ದರಿಂದ ನಾವು ಹೋಗಬೇಕಾದ ಸ್ಥಳಕ್ಕೆ ವೇಳೆಗೆ ಸರಿಯಾಗಿ ತಲುಪಲಾಗುವುದಿಲ್ಲ' ಎಂದು ಎಚ್ಚರಿಕೆ ಇತ್ತಿದ್ದರು. ಆದರೇನು? ಸ್ವಾಮೀಜಿಯವರಿಗೆ ಆ ಕೂಲಿಗಳ ಮೇಲೆ ಕರುಣೆಯುಂಟಾಗಿ ಚಹಾ-ತಂಬಾಕು ಸೇವನೆಗಾಗಿ ಮೇನೆಯನ್ನಿಳಿಸಲು ಅನುಮತಿ ಕೊಟ್ಟರು. ಸ್ವಾಮಿ ವಿರಜಾನಂದರು ಆಗ ಅಲ್ಲಿರಲಿಲ್ಲ; ಸ್ವಲ್ಪ ಹಿಂದೆ ಬಿದ್ದಿದ್ದರು. ಅಂಗಡಿ ಹತ್ತಿರ ಬಂದು ನಡೆದುದನ್ನು ನೋಡಿದಾಗ ಮುಂದಾಗಲಿರುವುದನ್ನು ಗ್ರಹಿಸಿ ಆತಂಕಗೊಂಡರು. ಪಹಾಡಿ ಕೂಲಿಗಳ ಸ್ವಭಾವ ಇವರಿಗೆ ಚೆನ್ನಾಗಿಯೇ ತಿಳಿದಿತ್ತು. ಹಾಗೇ ಆಗಿಬಿಟ್ಟಿತು ಕೂಡ. ಕೂಲಿಗಳ ಚಹಾ-ತಂಬಾಕು ಸೇವನೆ ಮುಗಿಯುವಷ್ಟರಲ್ಲಿ ಐದು ಗಂಟೆಯಾಗಿಬಿಟ್ಟಿತ್ತು. ಅಷ್ಟು ಹೊತ್ತಿಗಾಗಲೇ ಕತ್ತಲೆ ಆವರಿಸುತ್ತಿತ್ತು. ಆ ಮಳೆ-ಹಿಮಪಾತದಲ್ಲಿ ಪ್ರಯಾಣ ಬೆಳೆಸುವುದು ಸೂಕ್ತವಲ್ಲ. ಆದ್ದರಿಂದ ಆ ಚಿಕ್ಕ ಚಹಾದ ಅಂಗಡಿಯಲ್ಲೇ ರಾತ್ರಿಯನ್ನು ಕಳೆಯದೆ ಬೇರೆ ಉಪಾಯವಿರಲಿಲ್ಲ.

ಅದಾದರೋ ಅತಿ ಚಿಕ್ಕದಾದ, ಮಲಿನವಾದ ಗುಡಿಸಲು; ಅದರ ಒಂದು ಪಕ್ಕದಲ್ಲೇ ಚಹಾ ಅಂಗಡಿ; ಅಲ್ಲೇ ಬೆಂಕಿ ಹಾಕಿದ್ದರಿಂದ ಹೊಗೆಯೋ ಹೊಗೆ. ಇದನ್ನೆಲ್ಲ ಗಮನಿಸಿದ ಸ್ವಾಮೀಜಿಯವರು ಚಿಕ್ಕ ಬಾಲಕರಂತೆ ಕೋಪಗೊಂಡು ಶಿವಾನಂದರಿಗೆ, ''ತಾರಕ್ ದಾ, ಕಾಳೀಕೃಷ್ಣನೇನೋ ಚಿಕ್ಕ ಹುಡುಗ, ನೀವು ದೊಡ್ಡವರಿದ್ದೂ ಇಂಥ ಕೆಟ್ಟ ಹವೆಯಲ್ಲಿ, ಯಾವ ಧೈರ್ಯದಿಂದ ನನ್ನನ್ನು ಈ ಪರ್ವತದ ಹಾದಿಯಲ್ಲಿ ಕರೆತಂದಿರಿ?'' ಎಂದರು. ಕಾಳೀಕೃಷ್ಣರನ್ನು ಕುರಿತು, ''ನೀನು ನನ್ನನ್ನು ಕಾಠ್‌ಗೋದಾಮಿನಿಂದ ಆಲ್ಮೋರಕ್ಕೆ ಹೋಗಲು ಬಿಡದೆ ಮಾಯಾವತಿಗೆ ಬರುವಂತೆ ಏಕೆ ಬಲವಂತ ಮಾಡಿದೆ?' ಎಂದು ರೇಗಿದರು.

ಕಾಳೀಕೃಷ್ಣರು ಎಲ್ಲವನ್ನೂ ಮೌನವಾಗಿ ಕೇಳಿಸಿಕೊಂಡಿದ್ದು, ನಂತರ ನಿಧಾನವಾಗಿ ಧೈರ್ಯದಿಂದ, ''ಆದರೆ ದೋಷವೆಲ್ಲ ನಿಮ್ಮದೇ. ನಾನು ನಿಮಗೆ ಮೊದಲೇ ಎಚ್ಚರಿಸಿದ್ದೆ. ನೀವೇ ತಾನೇ ದಂಡಿ ಇಳಿಸಲು ಕೂಲಿಗಳಿಗೆ ಅನುಮತಿ ಕೊಟ್ಟಿದ್ದಿರಿ. ಅದರಿಂದಲೇ ಇಷ್ಟೊಂದು ರಂಪಾಟಗಳೆಲ್ಲ ಉಂಟಾದುದು. ಅವರು ಇಲ್ಲಿ ಅಷ್ಟು ಹೊತ್ತು ತಡ ಮಾಡದಿದ್ದರೆ ಹೇಗೋ ನಾವು ಪ್ರವಾಸಿ ಮಂದಿರ ತಲುಪಿಬಿಡುತ್ತಿದ್ದೆವು'' ಎಂದುಬಿಟ್ಟರು.

ಕಾಳೀಕೃಷ್ಣರ ಶಾಂತವಾದರೂ ದೃಢವಾದ ಆತ್ಮಸಮರ್ಥನೆಯನ್ನು ಕೇಳಿ, ಸ್ವಾಮೀಜಿ ಕೂಡಲೇ ಮಗುವಿನಂತೆ ಶಾಂತರಾಗಿಬಿಟ್ಟರು. ''ಒಳ್ಳೆಯದು, ಆದದ್ದು ಆಗಿಹೋಯಿತು. ಬೈದದ್ದಕ್ಕಾಗಿ ಬೇಜಾರು ಮಾಡಿಕೊಳ್ಳಬೇಡ. ತಂದೆಯೂ ಮಗನನ್ನು ಬಯ್ಯುವುದಿಲ್ಲವೆ? ಇರಲಿ ಬಿಡು, ಬಾ. ರಾತ್ರಿ ಕಳೆಯಲು ವ್ಯವಸ್ಥೆ ಮಾಡಿಕೊಳ್ಳೋಣ' ಎಂದರು.

ಲಾಲಾ ಗೋವಿಂದ ಲಾಲ್ ಷಾ ಮತ್ತು ಸದಾನಂದರು ಎಲ್ಲರಿಗಿಂತ ಮುಂದಾಗಿಯೇ ಸಾಗಿದ್ದರು. ಸ್ವಾಮೀಜಿಯವರು ಪ್ರವಾಸಿ ಮಂದಿರ ತಲುಪುವುದಕ್ಕೂ ಮೊದಲೇ ಅವರಿಗಾಗಿ ಎಲ್ಲ ಸಿದ್ಧತೆಯನ್ನು ಮಾಡಲು ಅಗ್ಗಿಷ್ಟಿಕೆ ಹೊತ್ತಿಸಿ ಕೊಠಡಿಯನ್ನು ಬೆಚ್ಚಗಿರಿಸುವ ಉದ್ದೇಶದಿಂದ ಅವರು ಹಾಗೆ ಹೊರಟಿದ್ದರು. ಇತ್ತ ಗುಡಿಸಲಿನ ಅಂಗಡಿಯಲ್ಲಿ ಅವರಿಬ್ಬರನ್ನು ಕಾಣದೆ ಸ್ವಾಮೀಜಿಯವರು ತುಂಬ ಚಿಂತಿತರಾದರು. ಆ ಭಯಾನಕ ಚಳಿಯ ರಾತ್ರಿಯಲ್ಲಿ ಅವರು ರಸ್ತೆ ತಪ್ಪಿ ಯಾವ ವಿಪತ್ತಿಗೆ ಸಿಲುಕಿರುವರೋ ಎಂದು ಭಾವಿಸಿ ಸ್ವಾಮೀಜಿ ಅವರ ಸುದ್ದಿ-ಸಮಾಚಾರ ತಿಳಿಯಲು ಮತ್ತೆ ಮತ್ತೆ ತಮ್ಮ ಆಗ್ರಹವನ್ನು ವ್ಯಕ್ತಪಡಿಸಿದರು. ಆಗ ಅಂಗಡಿ ಮಾಲೀಕನು ಸಮಾಚಾರ ತಿಳಿದು ಬರಲು ತಾನು ತನ್ನ ತಂಗಿಯ ಮಗನನ್ನು ಕಳುಹಿಸುವುದಾಗಿಯೂ, ಅದಕ್ಕೆ ೨ ರೂ ಭಕ್ಷೀಸು ಕೊಡಬೇಕೆಂದೂ ಕೇಳಿದನು. ಅವನು ಹೊರಟು ಕೆಲವು ಗಂಟೆಯೊಳಗಾಗಿ, ಅವರಿಬ್ಬರೂ ಏನೂ ತೊಂದರೆಯಿಲ್ಲದೆ ಪ್ರವಾಸಿ ಮಂದಿರವನ್ನು ತಲುಪಿದ್ದಾರೆಂದೂ, ಸ್ವಾಮೀಜಿ ಹಾಗೂ ಇತರರ ಆಗಮನದ ನಿರೀಕ್ಷೆಯಲ್ಲಿರುವರೆಂದೂ ಸುದ್ದಿಯನ್ನು ತಂದನು. ಆಗ ಸ್ವಾಮೀಜಿಯವರು ನಿರಾಳಗೊಂಡರು. ಸುದ್ದಿ ತಂದವನಿಗೆ ಭಕ್ಷೀಸು ಕೊಟ್ಟು ಖುಷಿಪಡಿಸಲಾಯಿತು.

ಅಂಗಡಿಯವನು ಕೊಟ್ಟ ಗಟ್ಟಿಯಾದ ದಪ್ಪದಪ್ಪ ರೊಟ್ಟಿಗಳನ್ನು ಕಡಿದು ತಿಂದು, ಹೇಗೋ ಮುದುಡಿಕೊಂಡು ಎಲ್ಲರೂ ನಿದ್ದೆಯಿಲ್ಲದೆ ರಾತ್ರಿಯನ್ನು ಕಳೆಯಬೇಕಾಯಿತು. ಅಂದು ೧೯೦೦ ಡಿಸೆಂಬರ್ ೩೧ ಎಂಬುದನ್ನು ಪ್ರಾಸಂಗಿಕವಾಗಿ ಕಾಳೀಕೃಷ್ಣರು ಸ್ವಾಮೀಜಿಯವರಿಗೆ ನೆನಪಿಸಿದರು. ೧೯ನೇ ಶತಮಾನವು ಮುಗಿದು ೨೦ನೇ ಶತಮಾನವು ಕಾಲಿಡುತ್ತಿದೆ, ಇಂತಹ ಸಂಧಿ ರಾತ್ರಿಯನ್ನು ಎಲ್ಲರೂ ಈ ರೀತಿಯಾಗಿ ಕಳೆಯುತ್ತಿರುವುದು ಅರ್ಥಗರ್ಭಿತವಾಗಿದೆ ಎಂದರು. ಸ್ವಾಮೀಜಿ ಅದನ್ನು ಕೇಳಿ ಚಿಂತಾಮಗ್ನರಾಗಿ ಸಣ್ಣದಾಗಿ ನಕ್ಕರು.

*(ಮುಂದುವರಿಯುವುದು)*

---

ತಂತಿಯ ಮೂಲಕ ತಿಳಿಸಿದ್ದರು. ಮಾಯಾವತಿಯಿಂದ ಯಾರೂ ಬರದಿದ್ದ ಪಕ್ಷದಲ್ಲಿ ಆಲ್ಮೋರಕ್ಕೆ ಹೋಗುವುದೆಂದೂ, ಅಲ್ಲಿಂದ ನಂತರ ಮಾಯಾವತಿಗೆ ಹೊರಡುವುದೆಂದೂ ಅವರು ನಿಶ್ಚಯಿಸಿದ್ದರು. ಸ್ವಾಮೀಜಿಯವರ ತಂತಿಯನ್ನು ಪಡೆದ ಬದರಿ ಷಾ ಅವರು, ತಮ್ಮ ಸೋದರನ ಮಗ ಲಾಲಾ ಗೋವಿಂದ ಲಾಲ್ ಷಾರನ್ನು ಕಾಠ್‌ಗೋದಾಮಿಗೆ ಕಳುಹಿಸಿದ್ದರು.

# ಶ್ರೀ ಮಧ್ವಾಚಾರ್ಯರು

ಆಂಗ್ಲಮೂಲ: **ಸ್ವಾಮಿ ತಪಸ್ಯಾನಂದ** ಕನ್ನಡಕ್ಕೆ: **ಸ್ವಾಮಿ ವೀರೇಶಾನಂದ**

**ಭಾಗ ೧**

ವೇದಾಂತದ ಒಂದು ಮುಖ್ಯ ಧಾರೆಯಾದ ದ್ವೈತಮತವನ್ನು ಪ್ರತಿಪಾದಿಸಿದವರಲ್ಲಿ ಪ್ರಮುಖರು ಶ್ರೀಮನ್ಮಧ್ವಾಚಾರ್ಯರು. ಅವರ ಸ್ಫೂರ್ತಿದಾಯಕ ಜೀವನ ಹಾಗೂ ತತ್ತ್ವವನ್ನು 'Bhakti Schools of Vedanta' ಎಂಬ ಗ್ರಂಥದಲ್ಲಿ ಸರಳವಾಗಿಯೂ ಸುಂದರವಾಗಿಯೂ ನಿರೂಪಿಸಲಾಗಿದೆ. ಲೇಖಕರು ಶ್ರೀರಾಮಕೃಷ್ಣರ ನೇರ ಶಿಷ್ಯರಾದ ಸ್ವಾಮಿ ಶಿವಾನಂದರ ಶಿಷ್ಯರು. ಆಧ್ಯಾತ್ಮಿಕ ಗುರುವಾಗಿಯೂ ಬರಹಗಾರರಾಗಿಯೂ ಅತ್ಯಂತ ಪ್ರಸಿದ್ಧರಾಗಿದ್ದ ಪೂಜ್ಯರು ರಾಮಕೃಷ್ಣ ಮಹಾಸಂಘದ ಉಪಾಧ್ಯಕ್ಷರಾಗಿದ್ದವರು. ಅನುವಾದಕರು ಈ ಪತ್ರಿಕೆಯ ಹಿಂದಿನ ಸಂಪಾದಕರು; ಪ್ರಸ್ತುತ ಬೇಲೂರು ಮಠದ ಬ್ರಹ್ಮಚಾರಿ ಪ್ರಶಿಕ್ಷಣ ಕೇಂದ್ರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.



## ಮಧ್ವಾಚಾರ್ಯರ ಜನ್ಮ ಮತ್ತು ಬಾಲ್ಯ

ಶ್ರೀ ಮಧ್ವಾಚಾರ್ಯರ ಜೀವನದ ಬಗ್ಗೆ (೧೨೩೮–೧೩೧೭) ನಮಗೆ ಗೊತ್ತಿರುವುದೆಲ್ಲವೂ, **'ಮಧ್ವವಿಜಯ'** ಎಂಬ ಗ್ರಂಥದ ಮೂಲಕ. ಈ ಗ್ರಂಥವು ಸಂಸ್ಕೃತದಲ್ಲಿದೆ. ಇದನ್ನು ರಚಿಸಿದವರು ನಾರಾಯಣ ಪಂಡಿತಾಚಾರ್ಯರು. ಇದು ಐತಿಹಾಸಿಕವಾಗಿ ಮತ್ತು ಆಧ್ಯಾತ್ಮಿಕ ಕಾವ್ಯವಾಗಿ ಬಹಳ ಮಹತ್ವವನ್ನು ಹೊಂದಿದೆ. ಐತಿಹಾಸಿಕವಾಗಿ ಹೆಚ್ಚು ಕಡಮೆ ಇದೊಂದು ಪ್ರಾಮಾಣಿಕ ಗ್ರಂಥವೆಂದು ಹೇಳಬಹುದು. ಏಕೆಂದರೆ ಇದನ್ನು ರಚಿಸಿದ ಲೇಖಕರು ಆಚಾರ್ಯರ ಸಮಕಾಲೀನರು. ಆಚಾರ್ಯರ ಮರಣವಾದ ಕೆಲವೇ ಸಮಯದಲ್ಲಿ ಈ ಗ್ರಂಥವನ್ನು ರಚಿಸಲಾಯಿತು. ನಾರಾಯಣ ಪಂಡಿತರ (೧೨೮೭–೧೩೭೦) ತಂದೆ ತ್ರಿವಿಕ್ರಮ ಪಂಡಿತರು ಬಹು ದೊಡ್ಡ ಅದ್ವೈತ ವಿದ್ವಾಂಸರಾಗಿದ್ದರು. ಆಚಾರ್ಯರ ಜೊತೆ ವಾದ ಮಾಡಿ ಸೋತುಹೋದ ನಂತರ, ಅವರ ಶಿಷ್ಯರಾದರು. ಶ್ರೀ ಮಧ್ವಾಚಾರ್ಯರ ಜೀವನದಲ್ಲಿ ಅನೇಕ ಪವಾಡ ಸದೃಶ ಘಟನೆಗಳನ್ನು ನೋಡುತ್ತೇವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಿದ್ದೇವೆ. ಆಚಾರ್ಯರ ವ್ಯಕ್ತಿತ್ವವು ಅವರ ಸಮಕಾಲೀನರ ಮೇಲೆ ಎಂಥ ಅಗಾಧ ಪ್ರಭಾವವನ್ನು ಬೀರಿದ್ದವು ಎಂದು ತಿಳಿದುಕೊಳ್ಳುವುದಕ್ಕೆ ಇವು ಸಹಾಯ ಮಾಡುತ್ತವೆ.

ಭಾರತೀಯ ಜನರ ಮನಸ್ಸು ಯಾವತ್ತೂ ಮಹಾಪುರುಷರ ಜನ್ಮವು ದಿವ್ಯವಾದ ಕಾರಣದಿಂದ ಉಂಟಾಗಿದೆ ಎಂದು ನಂಬುತ್ತದೆ. ಶಂಕರರು ಶಿವನ ಅವತಾರ ಎಂಬ ನಂಬಿಕೆ ಇದೆ. ಹಾಗೆಯೇ ರಾಮಾನುಜರು ವಿಷ್ಣುವಿನ ಮೊದಲ ಶೇಷನಾದ ಆದಿಶೇಷನ ಅವತಾರ ಎಂಬ ಪ್ರಸಿದ್ಧಿಯೂ ಇದೆ. ಇದೇ ರೀತಿ ಮಧ್ವಾಚಾರ್ಯರು ಮುಖ್ಯಪ್ರಾಣನ ಅವತಾರ ಎಂಬ ಪ್ರತೀತಿ ಇದೆ. ಇದರ ಬಗ್ಗೆ ಮಧ್ವವಿಜಯದಲ್ಲಿ ಬರುವ ವೃತ್ತಾಂತ ಹೀಗಿದೆ: ಶಂಕರರ ಅದ್ವೈತ ತತ್ತ್ವದ ಪ್ರಸಾರದಿಂದ ಪರಮಾತ್ಮನ ಮೇಲಿನ ಪರಿಶುದ್ಧ ಭಕ್ತಿಪಂಥವು ಲುಪ್ತವಾಗಿ ಹೋಯಿತು. ಹೀಗಾಗಿ ಭಕ್ತರಾದ ದೇವತೆಗಳು ಈ ಪ್ರತಿರೋಧೀ ಸಿದ್ಧಾಂತದಿಂದ ಜಗತ್ತನ್ನು ಕಾಪಾಡುವಂತೆ ಮಹಾವಿಷ್ಣುವನ್ನು ಪ್ರಾರ್ಥಿಸಿದರು. ಭಗವಂತನು ಕಲಿಯುಗದಲ್ಲಿ ಅವತಾರವನ್ನು ಎತ್ತುವುದಿಲ್ಲ. ಹೀಗಾಗಿ ಅವನು ಮುಖ್ಯಪ್ರಾಣನಿಗೆ ಭುವಿಯಲ್ಲಿ ಅವತಾರವೆತ್ತುವಂತೆ ಆಜ್ಞಾಪನೆ ಮಾಡಿದನು. ಮುಖ್ಯಪ್ರಾಣನನ್ನು ಸಾಮಾನ್ಯವಾಗಿ ವೇದಾಂತದ ಹಿರಣ್ಯಗರ್ಭ ತತ್ತ್ವಕ್ಕೆ ಹೋಲಿಸಲಾಗುತ್ತದೆ. ಮುಖ್ಯಪ್ರಾಣನನ್ನು 'ವಾಯುದೇವರು' ಎಂದೂ ಕರೆಯುತ್ತಾರೆ. ಹಿಂದಿನ ಯುಗಗಳಲ್ಲಿ ಮುಖ್ಯಪ್ರಾಣನೇ ರಾಮನ ನಿಷ್ಠಾವಂತ ಸೇವಕ ಮತ್ತು ವಿಭೂತಿಯಾದ ಹನುಮಂತನಾಗಿಯೂ, ಮಹಾಭಾರತದಲ್ಲಿ ಅತ್ಯಂತ ಬಲಿಷ್ಠನೆಂದೂ, ಕೌರವಪರ ರಾಜರಾಗಿ ಹುಟ್ಟಿರುವ ಅಸುರರನ್ನು ದಮನ ಮಾಡಿದವನೆಂದು ಮಹಾಭಾರತದಲ್ಲಿ ಪ್ರಖ್ಯಾತನಾದ ಭೀಮಸೇನನಾಗಿಯೂ ಅವತಾರವೆತ್ತಿದನು.

ಹೀಗೆ ಮಧ್ವಾಚಾರ್ಯರ ಜನ್ಮಕ್ಕೆ ಮಹಾವಿಷ್ಣುವಿನ ಪ್ರಥಮ ಕಿಂಕರರಾದ ಮುಖ್ಯಪ್ರಾಣನೇ ಮೂಲಕಾರಣ ಎಂದು ತಿಳಿದುಬರುತ್ತದೆ.

ಶ್ರೀ ಮಧ್ವರಿಗೆ ಇನ್ನೂ ಮೂರು ಹೆಸರುಗಳಿವೆ: ವಾಸುದೇವ, ಪೂರ್ಣಪ್ರಜ್ಞ ಮತ್ತು ಆನಂದತೀರ್ಥ. ಅವರು ಖಚಿತವಾಗಿಯೂ ಕ್ರಿ.ಶ. ೧೨೩೮ರಿಂದ ೧೩೧೭ರವರೆಗೆ ಜೀವಿಸಿದ್ದರೆಂದು ಇತಿಹಾಸ ಹೇಳುತ್ತದೆ. ಅವರು ೭೯ ವರ್ಷಗಳ ತುಂಬು ಜೀವನವನ್ನು ನಡೆಸಿದರು. ತುಳು ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ ಅವರು ಜನಿಸಿದ್ದು ಪಾಜಕ ಕ್ಷೇತ್ರದಲ್ಲಿ. ಅದು ಇಂದಿನ ಉಡುಪಿ ನಗರಕ್ಕೆ ೮ ಮೈಲುಗಳ ದೂರದಲ್ಲಿ ವಾಯವ್ಯ ದಿಕ್ಕಿಗೆ ಇರುವ ಪುಟ್ಟದೊಂದು ಗ್ರಾಮ. ಇದು ಕರ್ನಾಟಕದ ಉಡುಪಿ ಜಿಲ್ಲೆಯಲ್ಲಿದೆ. ಅವರ ತಂದೆ ಮಧ್ವಗೇಹ ಭಟ್ಟರು ಇತಿಹಾಸಗಳು ಮತ್ತು ಪುರಾಣಗಳಲ್ಲಿ ಪಾರಂಗತರು. ಸ್ಥಳೀಯ ಭಾಷೆಯಲ್ಲಿ ಅವರನ್ನು ನಾಡಂತಿಲ್ಲಾಯ ಎಂದು ಕರೆಯುತ್ತಿದ್ದರು. ಇವರು ಮತ್ತು ಮಧ್ವರ ಗುರುಗಳಾಗಿದ್ದ ಅಚ್ಯುತ ಪ್ರೇಕ್ಷರು – ಇಬ್ಬರು ಕೂಡ ಏಕಾಂತ ವೈಷ್ಣವ ಪಂಗಡಕ್ಕೆ ಸೇರಿದವರು ಎಂದು ಗುರುತಿಸಲಾಗಿದೆ. ಅವರು ಭಗವಾನ್ ವಿಷ್ಣುವಿನ ಭಕ್ತರು ಮತ್ತು ಪಾಂಚರಾತ್ರ ಆಗಮವನ್ನು ತಮ್ಮ ಆಚಾರಗಳಲ್ಲಿ ಅನುಸರಿಸುತ್ತಿದ್ದರು. ಆಗಿನ ಕಾಲದಲ್ಲಿ ಪ್ರಸಿದ್ಧಿಯಲ್ಲಿದ್ದ ಅದ್ವೈತ ಸಿದ್ಧಾಂತದಲ್ಲಿ ಈ ಗುಂಪಿನ ಬ್ರಾಹ್ಮಣರೆಲ್ಲ ಪ್ರಭಾವಿತರಾಗಿದ್ದರು. ಏಕೆಂದರೆ ಅದು ಭಾರತದಾದ್ಯಂತ ವಿದ್ವಾಂಸರಿಂದ ಸರ್ವಮಾನ್ಯವಾಗಿತ್ತು. ಶಂಕರರು ಅದ್ವೈತ ಸಿದ್ಧಾಂತವನ್ನು ಕ್ರೋಢೀಕರಿಸಿದರು. ಉಡುಪಿಯಲ್ಲಿರುವ ಅನಂತೇಶ್ವರ ದೇವಸ್ಥಾನವು ಬಹಳ ಪ್ರಾಚೀನವಾದ ದೇಗುಲ. ಅದು ಮಧ್ವರು ಹುಟ್ಟುವುದಕ್ಕಿಂತಲೂ ಮುಂಚೆಯೇ ಇತಿಹಾಸ ಪುರಾಣಾದಿಗಳನ್ನು ಅಧ್ಯಯನ ಮಾಡುವ ಕೇಂದ್ರವಾಗಿ ಪ್ರಸಿದ್ಧಿಯನ್ನು ಪಡೆದಿತ್ತು. (ಉಡುಪಿಯು ಪ್ರಾಚೀನ ಕಾಲದಲ್ಲಿ ಶಿವಳ್ಳಿ ಅಥವಾ ಶಿವಬೆಳ್ಳಿ ಎಂಬ ಹೆಸರನ್ನು ಪಡೆದಿತ್ತು. ಇದರ ಸಂಸ್ಕೃತ ಹೆಸರು ರಜತಪುರ ಎಂದು. ಇಲ್ಲಿ ಇನ್ನೊಂದು ಬಹುಮುಖ್ಯವಾದ ದೇಗುಲ ಚಂದ್ರಮೌಳೀಶ್ವರ ದೇವಸ್ಥಾನ. ಅಲ್ಲಿನ ಶಿವಲಿಂಗದ ಪೀಠವು ಬೆಳ್ಳಿಯದಾಗಿತ್ತು. ಹೀಗಾಗಿ ಈ ಕ್ಷೇತ್ರಕ್ಕೆ ಶಿವ-ಬೆಳ್ಳಿ, ಶಿವಳ್ಳಿ ಎಂದು ಹೆಸರಾಯಿತು. ತುಳು ಭಾಷೆಯನ್ನು ಮಾತನಾಡುವ ಬ್ರಾಹ್ಮಣ ವರ್ಗದವರು ಶಿವಭಕ್ತರು ಹಾಗೆಯೇ ವಿಷ್ಣುಭಕ್ತರು ಕೂಡ. ಅವರು ಶಿವಲಿಂಗದಲ್ಲಿಯೇ ಇಬ್ಬರನ್ನೂ ಆವಾಹಿಸಿ ಪೂಜಿಸುತ್ತಿದ್ದರು. ಅನಂತೇಶ್ವರ ದೇವಸ್ಥಾನದಲ್ಲಿ ಇರುವುದು ಶಿವಲಿಂಗ. ಆದರೆ ಅದು ವಿಷ್ಣು ದೇಗುಲ ಎಂಬ ಹೆಸರು ಪಡೆದಿತ್ತು. ಶಿವಲಿಂಗದಲ್ಲಿಯೇ ವಿಷ್ಣುಪೂಜೆ ನಡೆಯುತ್ತಿತ್ತು. ಈ ಬಗೆಯ ಹಲವು ದೇವಸ್ಥಾನಗಳು ಆ ಪರಿಸರದಲ್ಲಿ ಆಗ ಇದ್ದವು. ಇವುಗಳಲ್ಲಿ ವಿಷ್ಣು ಸಹಸ್ರನಾಮ ಮತ್ತು ಶಿವ ಸಹಸ್ರನಾಮ – ಇವೆರಡರ ಪಾರಾಯಣವೂ ಜರುಗುತ್ತಿತ್ತು. ಕೆಲವು ದೇವಸ್ಥಾನಗಳಲ್ಲಿ ವಿಗ್ರಹವನ್ನು ಶಂಕರನಾರಾಯಣ ಎಂದೂ, ಇನ್ನು ಕೆಲವು ಕಡೆ ಹರಿಹರ ಎಂದೂ ಕರೆಯುತ್ತಿದ್ದರು. ಹೀಗಾಗಿ ಉಡುಪಿಯ ಈ ಪರಿಸರವು ಶೈವ, ವೈಷ್ಣವ ಮತ್ತು ಅದ್ವೈತ ಸಂಪ್ರದಾಯಗಳು ಮಿಳಿತಗೊಂಡ ಕ್ಷೇತ್ರವಾಗಿತ್ತು. ಈಗ ಪ್ರಸಿದ್ಧವಾಗಿರುವ ಉಡುಪಿಯ ಶ್ರೀಕೃಷ್ಣ ಮಂದಿರವನ್ನು ಸ್ಥಾಪಿಸಿದವರು ಮಧ್ವಾಚಾರ್ಯರು.)

ಮಧ್ವಗೇಹ ಭಟ್ಟರಿಗೆ ಮಕ್ಕಳಿರಲಿಲ್ಲ. ಅವರು ಪಡೆದ ಇಬ್ಬರು ಗಂಡುಮಕ್ಕಳು ಬಾಲ್ಯದಲ್ಲಿಯೇ ಅಸುನೀಗಿದ್ದರು. ಹೀಗಾಗಿ ಮಗುವನ್ನು ಪಡೆಯಲು ಅವರು ಅನಂತೇಶ್ವರ ದೇಗುಲದಲ್ಲಿ ಬಹಳ ಕಾಲದವರೆಗೆ ವ್ರತಾನುಷ್ಠಾನಗಳನ್ನು ಕೈಗೊಂಡರು; ಪ್ರಾರ್ಥನೆಯನ್ನು ಮಾಡಿದರು. ಕಡೆಗೆ ಪರಮಾತ್ಮನ ಅನುಗ್ರಹದಿಂದ ದಿವ್ಯಶಿಶುವೊಂದು ಹುಟ್ಟಿತು. ಚಂದ್ರನಂತೆ ಸುಂದರವಾದ ಮುಖ; ದೊಡ್ಡ ದೊಡ್ಡ ಅರಳಿದ ಕಣ್ಣುಗಳು. ತಂದೆ ಅವನಿಗೆ ವಾಸುದೇವ ಎಂದು ಹೆಸರಿಟ್ಟರು. ಜಗತ್ತಿಗೆ ಇವನು ಜ್ಞಾನವನ್ನು ನೀಡಲಿ, ಎಂದಿಗೂ ನಾರಾಯಣನಲ್ಲಿ ಭಕ್ತಿಯಿಂದ ನಡೆದುಕೊಳ್ಳಲಿ ಎಂಬ ಉದ್ದೇಶ ಇದರಲ್ಲಿ ಅಡಗಿದ್ದಿರಬಹುದು. ಶಿಶುವಾಗಿದ್ದಾಗಲೇ ವಾಸುದೇವನು ಅನೇಕ ಅದ್ಭುತ ಘಟನೆಗಳಿಗೆ ಸಾಕ್ಷಿಯಾದನು. ಅವುಗಳನ್ನು ಹೀಗೆ ಪಟ್ಟಿಮಾಡಬಹುದು: ೧. ಮಧ್ವಗೇಹ ಭಟ್ಟರು ಮಗು ವಾಸುದೇವನನ್ನು ಕರೆದುಕೊಂಡು ಒಮ್ಮೆ ಅನಂತೇಶ್ವರ ದೇವಸ್ಥಾನಕ್ಕೆ ಹೋಗುತ್ತಾರೆ. ಅಲ್ಲಿ ಪರಮಾತ್ಮನಿಗೆ ಮಗುವನ್ನು ಸಮರ್ಪಿಸುತ್ತಾರೆ. ಆ ಮಾರ್ಗ ಕಾಡುಮೇಡುಗಳಿಂದ ಕೂಡಿತ್ತು, ದುರ್ಗಮವಾಗಿತ್ತು, ಅನೇಕ ಅಪಾಯಗಳಿಂದ ಕೂಡಿತ್ತು. ಹೀಗಿದ್ದರೂ ಮಗುವಿಗೆ ಏನೂ ಆಗಲಿಲ್ಲ. ಅದಕ್ಕೆ ಸ್ವಲ್ಪ ಅಂಜಿಕೆಯೂ ಆಗಲಿಲ್ಲ. ತಂದೆಯು ಸುಗಮವಾಗಿ ಮಗುವನ್ನು ಕರೆದುಕೊಂಡು ಹೋಗಲು ಸಾಧ್ಯವಾಗಿತ್ತು. ೨. ಒಮ್ಮೆ ತಪ್ಪಿನಿಂದಾಗಿ ವಾಸುದೇವನು ಚೆನ್ನಾಗಿ ಬೇಯಿಸದ ಹುರುಳಿಕಾಳನ್ನು ತಿಂದುಬಿಟ್ಟನು. ಇಷ್ಟಾದರೂ ಮಗುವಿನ ಆರೋಗ್ಯಕ್ಕೆ ಅದು ಏನೂ ಪ್ರಭಾವ ಬೀರಲಿಲ್ಲ. ೩. ಒಮ್ಮೆ ಕೇವಲ ಒಂದು ವರ್ಷ ಇರುವಾಗ, ಮಗುವು ಒಂದು ಎತ್ತಿನ ಬಾಲವನ್ನು ಹಿಡಿದುಕೊಂಡನು. ಆ ಎತ್ತು ಆಶ್ಚರ್ಯಕರವೆಂಬಂತೆ, ಪೊದೆಗಳು ಬೆಳೆದ ಹುಲ್ಲುಗಾವಲುಗಳನ್ನು ನುಗ್ಗಿತು. ಮಗುವೂ ಬಾಲವನ್ನು ಹಿಡಿದು ಹಿಂಬಾಲಿಸಿತು. ಎತ್ತು ಕಾಡಿಗೂ ಹೋಯಿತು. ಮಗು ಅಲ್ಲಿಗೂ ಹೋಯಿತು. ಇಷ್ಟಾದರೂ ಮಗುವಿಗೆ ಯಾವ ಅಪಾಯವೂ ಆಗಲಿಲ್ಲ. ೪. ಇನ್ನೊಂದು ದಿನ ಅವನ ತಂದೆ ಬಹಳ ದುಃಖದಲ್ಲಿದ್ದರು. ಸಾಲಗಾರನು ಅವರನ್ನು ಪೀಡಿಸುತ್ತಿದ್ದನು. ಮಗುವು ಅವನಿಗೆ ಕೆಲವು ಹುಣಸೆ ಬೀಜಗಳನ್ನು ನೀಡಿತು. ಈ ಪ್ರಕಾರ ವಾಸುದೇವನು ಅವನಿಗೆ ಮೋಕ್ಷವನ್ನೇ ಕೊಟ್ಟುಬಿಟ್ಟನು. ಗ್ರಾಮವಾಸಿಗಳು ತಮ್ಮ ಊರಿನಲ್ಲಿ ಇರುವ ದಿವ್ಯಶಿಶುವನ್ನು ಕಂಡು ಬಹಳ ಆಶ್ಚರ್ಯಚಕಿತರಾದರು; ಬಹಳ ಸಂತೋಷಪಟ್ಟರು.

ಹಲವು ವರ್ಷಗಳ ನಂತರ, ಇನ್ನೂ ಚಿಕ್ಕ ವಯಸ್ಸಿನವನೇ ಆಗಿದ್ದ ವಾಸುದೇವನು ಹಠಾತ್ತನೆ ಮನೆಯಿಂದ ಕಣ್ಮರೆಯಾದನು. ಅವನು ಹತ್ತಿರದ ಅರಣ್ಯವನ್ನು ಹೊಕ್ಕಿದ್ದನು. ದಾರಿಯಲ್ಲಿ ಸಿಕ್ಕ

ಹಾದಿಹೋಕರು ಅಪಾಯಗಳ ಬಗ್ಗೆ ಅವನನ್ನು ಎಚ್ಚರಿಸಿದರು. ಇಷ್ಟಾದರೂ ಹುಡುಗನು ಮುಂದುವರೆದನು. ಕುಡುವೂರ್ ಎಂಬ ಸ್ಥಳದಲ್ಲಿ ದಟ್ಟಕಾಡಿನ ಮಧ್ಯೆ ಇರುವ ನಾರಾಯಣ ದೇವಸ್ಥಾನದಲ್ಲಿ ದೇವರನ್ನು ಪೂಜಿಸಿದನು. ಅನಂತರ ಬನ್ನಂಜೆ ಎಂಬಲ್ಲಿನ ಶಿವನ ದೇವಸ್ಥಾನದಲ್ಲಿ ರಾತ್ರಿಯನ್ನು ಕಳೆದನು. ಅಲ್ಲಿಂದ ಉಡುಪಿಗೆ ಹೋಗಿ ಅನಂತೇಶ್ವರನ ದರ್ಶನವನ್ನು ಪಡೆದುಕೊಂಡನು. ಹುಡುಗ ಕಾಣದೆ ಹೋದುದನ್ನು ಕಂಡು, ತಂದೆತಾಯಿಗಳು ಕಂಗಾಲಾದರು. ಉಡುಪಿಗೆ ಹುಡುಕಿಕೊಂಡು ಬಂದು, ಮಗುವನ್ನು ಮನೆಗೆ ಕೊಂಡೊಯ್ದರು. ''ಈ ಎಲ್ಲ ಅಪಾಯಕಾರಿ ಜಾಗಗಳಲ್ಲಿ ಯಾರು ನಿನ್ನನ್ನು ರಕ್ಷಿಸಿದರು?'' ಎಂಬ ಪ್ರಶ್ನೆಗೆ ''ಭಗವಾನ್ ನಾರಾಯಣನೇ'' ಎಂದು ಆ ಪುಟ್ಟ ಹುಡುಗನು ಉತ್ತರ ಕೊಟ್ಟನು.



ಶಿವಭಟ್ಟನನ್ನು ತಿದ್ದಿದ ವಾಸುದೇವ

ಸ್ವಲ್ಪ ಕಾಲದ ನಂತರ ಮಧ್ಯಗೇಹ ಭಟ್ಟರು ಹುಡುಗನಿಗೆ ಅಕ್ಷರಾಭ್ಯಾಸ ಮಾಡಿಸಿದರು. ವಾಸುದೇವನು ಅದಾಗಲೇ ಸರ್ವಜ್ಞನಾಗಿಬಿಟ್ಟಿದ್ದನು. ಅವನಿಗೆ ಹೇಳಿಕೊಡುವ ಆವಶ್ಯಕತೆಯೇ ಇರಲಿಲ್ಲ. ಅವನ ಬುದ್ಧಿಮತ್ತೆಯ ಆಳ ಅಗಲಗಳು ಮಹಾಸಾಗರದಂತೆ ಇದ್ದವು. ಅವನಿಗೆ ಅಕ್ಷರಗಳು ಆಗಲೇ ಗೊತ್ತಿದ್ದವು. ಒಮ್ಮೆ ತನ್ನ ತಾಯಿಯ ಜೊತೆಯಲ್ಲಿ ನೇಯಂಪಲ್ಲಿ ಎಂಬ ಗ್ರಾಮಕ್ಕೆ ಹೋಗಿದ್ದನು. ಅಲ್ಲಿ ಶಿವ ಎಂಬ ಬ್ರಾಹ್ಮಣನನ್ನು ಕಂಡನು. ಅವನೊಬ್ಬ ಪೌರಾಣಿಕ. ಪುರಾಣ ಹೇಳುತ್ತಿದ್ದನು. ಅವನು ಮಾಡುತ್ತಿದ್ದ ತಪ್ಪುಗಳನ್ನು ಪುಟ್ಟ ವಾಸುದೇವನು ಎತ್ತಿತೋರಿಸಿದನು. ನೆರೆದಿದ್ದ ಜನರೆಲ್ಲ ಕೊಂಡಾಡಿದರು. ಇಷ್ಟೇ ಅಲ್ಲ, ತನ್ನ ತಂದೆ ಪುರಾಣಶ್ರವಣ ಮಾಡಿಸುತ್ತಿದ್ದ ಸಮಯದಲ್ಲಿ ಕೂಡ ಅವರು ಹೇಳಿದ ಒಂದು ಕಥೆಯಲ್ಲಿನ ತಪ್ಪನ್ನು ತೋರಿಸಿಬಿಟ್ಟನು.

ಎಂಟನೆಯ ವಯಸ್ಸಿಗೆ ವಾಸುದೇವನಿಗೆ ಉಪನಯನವಾಯಿತು. ಯಜ್ಞೋಪವೀತ ಧಾರಣೆಯ ಸಮಯದಲ್ಲಿ ಅವನ ತಂದೆಯು ಅವನಿಗೆ ಆದೇಶಿಸಿದರು: ''ಒಳ್ಳೆಯ ಬಾಳನ್ನು ಬಾಳು. ಅಗ್ನಿ ಉಪಾಸನೆಯನ್ನು ನಿಯಮಿತವಾಗಿ ಮಾಡು. ಗುರುಗಳ ಸೇವೆಯನ್ನು ಮಾಡು. ಬ್ರಹ್ಮಚರ್ಯವನ್ನು ಕಾಪಾಡಿಕೊಂಡು, ವೇದಗಳನ್ನು ಚೆನ್ನಾಗಿ ಅಧ್ಯಯನ ಮಾಡು.'' ಒಬ್ಬ ಗುರುಗಳ ಆರೈಕೆಯಲ್ಲಿ ವಾಸುದೇವನನ್ನು ಬಿಟ್ಟರು. ಅವನು ಈಗಾಗಲೇ ಕಲಿಯಬೇಕಾದದ್ದೆಲ್ಲವನ್ನೂ ಕಲಿತುಬಿಟ್ಟಿದ್ದಾನೆ! ಅಧ್ಯಯನವೆನ್ನುವುದು ಅವನಿಗೆ ಆಟವಾಗಿತ್ತು. ಒಂದೇ ನಿಮಿಷದಲ್ಲಿ ಎಲ್ಲವನ್ನೂ ಗ್ರಹಿಸಿಬಿಡುತ್ತಿದ್ದನು. ಎಲ್ಲ ವೇದಗಳೂ ಅವನಿಗೆ ಕರತಲಾಮಲಕವಾಗಿದ್ದವು. ಅಧ್ಯಯನದ ಅವಧಿ ಮುಗಿದ ಮೇಲೆ ಅವನು ಸಂಗಡಿಗರೊಂದಿಗೆ ಆಟವಾಡಲು ಆರಂಭಿಸಿಬಿಡುತ್ತಿದ್ದನು. ಓಡುವುದು, ನೆಗೆಯುವುದು, ಕುಸ್ತಿ, ನೀರಿನಲ್ಲಿ ಆಡುವ ಆಟಗಳು – ಹೀಗೆ ಹಲವಾರು ಆಟಗಳನ್ನು ಆಡುತ್ತಿದ್ದನು. ಅವನು ಇಷ್ಟೊಂದು ಆಟವಾಡುತ್ತಿದ್ದುದನ್ನು ನೋಡಿ ಗುರುಗಳಿಗೆ ಅವನ ಮೇಲೆ ಬೇಸರ ಬಂತು. ಅವರು ಒಂದು ದಿನ ಅವನನ್ನು ತರಾಟೆಗೆ ತೆಗೆದುಕೊಂಡರು. ''ಎಲ್ಲ ಸಮಯ ಕೇವಲ ಆಟವಾಡುವುದಿದ್ದರೆ ಗುರುಕುಲಕ್ಕೆ ಏಕೆ ತಾನೇ ಬರುತ್ತೀಯಾ?'' ಎಂದು ಕೇಳಿದರು. ಅದಕ್ಕೆ, ''ಗುರುಕುಲದಲ್ಲಿ ಅನುಸರಿಸುವ ವೇದಪಾರಾಯಣದ ವಿಧಾನ ತನಗೆ ಇಷ್ಟವಾಗಲಿಲ್ಲ'' ಎಂದು ವಾಸುದೇವನು ಉತ್ತರಕೊಟ್ಟನು. ''ಸರಿ, ನೀನು ಪಾರಾಯಣ ಮಾಡಿ ತೋರಿಸು'' ಎಂದರು ಗುರುಗಳು. ವಾಸುದೇವನು ತನ್ನದೇ ಆದ ರೀತಿಯಲ್ಲಿ ವೇದಪಾರಾಯಣ ಮಾಡಿದನು. ಅವನ ಉಚ್ಚಾರಣೆ ಸ್ಪಷ್ಟವಾಗಿತ್ತು. ವೈದಿಕ ಸ್ವರಗಳಲ್ಲಿ ಯಾವ ತಪ್ಪೂ ಇರಲಿಲ್ಲ. ಅವನ ವೇದಪಾರಾಯಣವನ್ನು ಗುರುಗಳೂ ಕೂಡ ಮೆಚ್ಚಿಕೊಂಡರು. ಇದಲ್ಲದೆ ಅಲ್ಲಿ ನೆರೆದಿದ್ದ ವಿದ್ವಾಂಸರೂ ಅದನ್ನು ಪ್ರಶಂಸಿಸಿದರು. ಕೆಲವು ಕಾಲದ ನಂತರ ಗುರುಗಳಿಗೆ ಕೊಡಬೇಕಾದ ಗುರುದಕ್ಷಿಣೆಯನ್ನು ಸಲ್ಲಿಸಿ ವಾಸುದೇವನು ತನ್ನ ಮನೆಗೆ ಹಿಂತಿರುಗಿದನು.

### ವಾಸುದೇವನು ಸಂನ್ಯಾಸದೀಕ್ಷೆ ಸ್ವೀಕರಿಸಿದ್ದು

ವಾಸುದೇವನಿಗೆ ಈಗ ಹದಿನಾರು ವರ್ಷ ವಯಸ್ಸು. ಶ್ರೀಹರಿಯೇ ಮುಖ್ಯಪ್ರಾಣನನ್ನು ಜಗತ್ತಿಗೆ ಬೋಧಿಸಲು ಕಳಿಸಿದ್ದಾನೆ. ಅಂಥ ಮುಖ್ಯಪ್ರಾಣನ ಅವತಾರವೇ ವಾಸುದೇವ. ತನ್ನ ಈ ಜೀವಿತೋದ್ದೇಶವನ್ನು ಕೈಗೊಳ್ಳಲು ವಾಸುದೇವನು ಸಂನ್ಯಾಸ ಸ್ವೀಕರಿಸಲು ಇಚ್ಛಿಸಿದನು. ಇದೇ ಈ ಉದ್ದೇಶದ ಸಾಧನೆಗೆ ಉತ್ತಮ ಉಪಾಯ ಎಂದು ಅವನು ಪರಿಗಣಿಸಿದನು. ಉಡುಪಿ ನಗರದ ಹತ್ತಿರದಲ್ಲಿಯೇ ಕಾರೆ ಎಂಬ ಗ್ರಾಮವಿದೆ. ಅಲ್ಲಿ ಒಂದು ಮಠವಿತ್ತು. ಅದರ ಮಠಾಧೀಶರು ಅಚ್ಯುತಪ್ರೇಕ್ಷರು. ಅವರು ಅನುಸರಿಸುತ್ತಿದ್ದ ತತ್ತ್ವಶಾಸ್ತ್ರದ ವಿಭಾಗ ಅದಾವುದು ಎಂಬುದು ಸರಿಯಾಗಿ ತಿಳಿದುಬಂದಿಲ್ಲ. ಆದರೆ ಮಧ್ವವಿಜಯ ಗ್ರಂಥವು ಅವರ ಬಗ್ಗೆ ಹೀಗೆ ಹೇಳುತ್ತದೆ: ಅಚ್ಯುತಪ್ರೇಕ್ಷರ ಗುರುಗಳು, ತಾವು ಕಾಲವಾಗುವ ಮುಂಚೆ ಅವರಿಗೆ, 'ಬ್ರಹ್ಮ ಮತ್ತು ಆತ್ಮ ಒಂದೇ, ಜಗತ್ತು ಮಿಥ್ಯೆ ಎಂಬ ಮಾಯಾವಾದವು ಸುಳ್ಳಿನಿಂದ

ಕೂಡಿದ್ದು' ಎಂದು ಹೇಳಿದ್ದರಂತೆ. ಹಾಗೆಯೇ ಪರಮಾತ್ಮನಾದ ನಾರಾಯಣನನ್ನು ತುಂಬು ಭಕ್ತಿಯಿಂದ ಆರಾಧಿಸೆಂದು ಉಪದೇಶ ಮಾಡಿದ್ದರಂತೆ. ಅಂದಿನಿಂದ ಅಚ್ಯುತಪ್ರೇಕ್ಷರು ಉಡುಪಿಯ ಅನಂತೇಶ್ವರ ದೇಗುಲದಲ್ಲಿ ಭಗವಂತನನ್ನು ಪೂಜಿಸಲು ಆರಂಭಿಸಿದರು. ಒಮ್ಮೆ ಸಾಕ್ಷಾತ್ ಅನಂತೇಶ್ವರನೇ ಅವರಿಗೆ ದರ್ಶನದಲ್ಲಿ ಕಾಣಿಸಿಕೊಂಡು, ಒಬ್ಬ ಮಹಾನ್ ಶಿಷ್ಯ ಅವರಿಗೆ ದೊರಕುವನು ಎಂದು ಭವಿಷ್ಯವಾಣಿಯನ್ನು ನುಡಿದಿದ್ದನಂತೆ. ಹೀಗೆ ವಾಸುದೇವನ ಆಗಮನವನ್ನು ಭಗವಂತನೇ ಗುರುಗಳಿಗೆ ಘೋಷಿಸಿಬಿಟ್ಟಿದ್ದನು. ವಾಸುದೇವನ ಪೋಷಕರು, ಅದರಲ್ಲೂ ತಾಯಿ, ವಾಸುದೇವನ ಸಂನ್ಯಾಸಸ್ವೀಕಾರಕ್ಕೆ ವಿರೋಧವಾಗಿದ್ದರು. ಹುಟ್ಟಿದ ಒಬ್ಬನೇ ಗಂಡುಮಗ ಮನೆಬಿಟ್ಟು ಹೋದರೆ, ವಂಶವೃದ್ಧಿ ಆಗುವ ಬಗೆ ಹೇಗೆ ಎಂಬುದೇ ಅವರ ಚಿಂತೆ. ಕೆಲವು ಕಾಲ ನಂತರ ವಾಸುದೇವನಿಗೆ ತಮ್ಮನೊಬ್ಬನು ಹುಟ್ಟಿದನು. ಇನ್ನೂ ತನಗೆ ಅನುಮತಿ ಕೊಡದಿದ್ದರೆ, ತನ್ನ ಸ್ವಂತ ನಾಡನ್ನು ಬಿಟ್ಟು ದೇಶಾಂತರ ಹೋಗಿ ಎಂದಿಗೂ ಅವರ ಕಣ್ಣಿನಿಂದ ಕಣ್ಮರೆಯಾಗಿಬಿಡುತ್ತೇನೆ ಎಂದು ವಾಸುದೇವನು ಬೆದರಿಕೆ ಹಾಕಿದನು. ಅನಂತರವಷ್ಟೇ ಅವನಿಗೆ ಸಂನ್ಯಾಸಿಯಾಗಲು ಅನುಮತಿ ದೊರೆಯಿತು. ಅವನಿಗೆ ಅಚ್ಯುತಪ್ರೇಕ್ಷರೇ ಸಂನ್ಯಾಸದೀಕ್ಷೆಯನ್ನು ದಯಪಾಲಿಸಿ, 'ಪೂರ್ಣಪ್ರಜ್ಞ' ಎಂಬ ಶುಭನಾಮವನ್ನು ಕೊಟ್ಟರು. ಸ್ವಲ್ಪಕಾಲದ ನಂತರ, ಪೂರ್ಣಪ್ರಜ್ಞರು ಗಂಗಾಸ್ನಾನಕ್ಕಾಗಿ ಉತ್ತರದೇಶಕ್ಕೆ ತೀರ್ಥಯಾತ್ರೆ ಹೋಗಲು ಅನುಮತಿ ನೀಡಬೇಕೆಂದು ತಮ್ಮ ಗುರುಗಳನ್ನು ಕೇಳಿಕೊಂಡರು. ಶಿಷ್ಯ ತಮ್ಮನ್ನು ಬಿಟ್ಟುಹೋಗುವುದು ಅಚ್ಯುತಪ್ರೇಕ್ಷರಿಗೆ ಇಷ್ಟವಿರಲಿಲ್ಲ. ಅವರು ಅನಂತೇಶ್ವರನನ್ನು ಹೃದಯಪೂರ್ವಕವಾಗಿ ಪ್ರಾರ್ಥನೆ ಮಾಡಿದರು. ಅದರಂತೆ ತಾಯಿ ಗಂಗೆಯೇ ಮಠದ ಕೊಳದಲ್ಲಿ ಉದ್ಭವವಾದಳು. ಎಲ್ಲರೂ ಗಂಗೆಯ ಪವಿತ್ರ ಜಲದಲ್ಲಿ ಮಿಂದು ಧನ್ಯರಾದರು. ಇದರಿಂದಾಗಿ, ಅಚ್ಯುತಪ್ರೇಕ್ಷರಿಗೆ ತಮ್ಮ ಪ್ರಿಯಶಿಷ್ಯನನ್ನು ಇನ್ನೂ ಕೆಲವು ಕಾಲ ಮಠದಲ್ಲಿಯೇ ಉಳಿಸಿಕೊಳ್ಳುವಂತೆ ಆಯಿತು.

ಅಚ್ಯುತಪ್ರೇಕ್ಷರ ಮಾರ್ಗದರ್ಶನದಲ್ಲಿ ನೂತನ ಯತಿಗಳು ವೇದಾಂತ ಅಧ್ಯಯನವನ್ನು ಆರಂಭಿಸಿದರು. ಅಚ್ಯುತಪ್ರೇಕ್ಷರು ಶ್ರೀಶಂಕರಾಚಾರ್ಯರು ಪ್ರತಿಪಾದಿಸಿದ ಅದ್ವೈತವೇದಾಂತದಲ್ಲಿ ಪ್ರವೀಣರು. ಅದನ್ನೇ ತಮ್ಮ ಶಿಷ್ಯನಿಗೆ ಉಪದೇಶಿಸಲು ಆರಂಭಿಸಿದರು. ಆದರೆ ಮೂಲಭೂತ ವಿಷಯಗಳಲ್ಲಿ ಶಿಷ್ಯ ಮತ್ತು ಗುರುವಿನ ನಡುವೆ ಅನೇಕ ಭಿನ್ನಾಭಿಪ್ರಾಯಗಳು ಬಹಳ ಸ್ವಲ್ಪಕಾಲದಲ್ಲಿಯೇ ಹುಟ್ಟಿಕೊಂಡವು. ಅದರಲ್ಲಿಯೂ ಅದ್ವೈತವೇದಾಂತದ ಮೇರುಕೃತಿಯಾದ ಇಷ್ಟಸಿದ್ಧಿಯ ಅಧ್ಯಯನ ಸಮಯದಲ್ಲಿ ಈ ವಿರುದ್ಧ ಅಭಿಪ್ರಾಯಗಳು ಇನ್ನೂ ಹೆಚ್ಚಾದವು. ಒಮ್ಮೆ ಭಾಗವತದ ಪಾರಾಯಣ ನಡೆಯುತ್ತಿತ್ತು. ಪೂರ್ಣಪ್ರಜ್ಞರು ಪಠ್ಯದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದರು. ಬಳಿಕ ಹಲವು ಗ್ರಂಥಗಳನ್ನು ಪರಾಮರ್ಶೆ ಮಾಡಿ ನೋಡಿದಾಗ, ಪೂರ್ಣಪ್ರಜ್ಞರು ಮಾಡಿದುದು ಸರಿಯಾಗಿದೆ ಎನ್ನುವುದು ಸಾಬೀತಾಯಿತು. ಇದರಿಂದ ಆಶ್ಚರ್ಯಗೊಂಡ ಅಚ್ಯುತಪ್ರೇಕ್ಷರು ಅವರಿಗೆ ಇಡೀ ಭಾಗವತದ ಪರಿಜ್ಞಾನ ಹೇಗೆ ಉಂಟಾಯಿತು ಎಂದು ಪ್ರಶ್ನೆ ಮಾಡಿದರು. ಅದಕ್ಕೆ ಉತ್ತರವಾಗಿ ಪೂರ್ಣಪ್ರಜ್ಞರು, ತಾವು ಇದನ್ನೆಲ್ಲ ಪೂರ್ವಜನ್ಮಗಳಲ್ಲಿಯೇ ಅಧ್ಯಯನ ಮಾಡಿರುವುದಾಗಿ ಹೇಳಿದರು.



ಪ್ರವಚನ ನೀಡುತ್ತಿರುವ ಮಧ್ವಾಚಾರ್ಯರು

ಪೂರ್ಣಪ್ರಜ್ಞರ ವಿದ್ವತ್ತು ಮತ್ತು ಅವರ ಆಧ್ಯಾತ್ಮಿಕ ಸುಸಂಪನ್ನತೆಗಳನ್ನು ಗುರುತಿಸಿ, ಅವರ ಗುರುಗಳು ಅವರನ್ನು 'ಆನಂದ ತೀರ್ಥ' ಎಂದು ಕರೆದರು. ಮಧ್ವ ಎನ್ನುವುದು ಅದರ ಸಮಾನ ಪದ ಅಷ್ಟೇ. ಆಚಾರ್ಯರು ಮುಂದೆ ಮಧ್ವ ಎಂಬ ಹೆಸರಿನಿಂದಲೇ ಪ್ರಖ್ಯಾತರಾದರು. ಪೂರ್ಣಪ್ರಜ್ಞರ ಅಸಾಧಾರಣ ಪಾಂಡಿತ್ಯ ಮತ್ತು ಪ್ರವಚನ ಸಾಮರ್ಥ್ಯಗಳಿಂದ ಬಹಳ ಪ್ರಭಾವಿತರಾದ ಅಚ್ಯುತಪ್ರೇಕ್ಷರು ಅವರನ್ನು ತಮ್ಮ ಮಠದ ಅಧಿಪತಿಯನ್ನಾಗಿ ನೇಮಿಸಿದರು.

ಕೆಲವು ವರ್ಷಗಳ ಕಾಲ ಆನಂದತೀರ್ಥರು ತಮಗೆ ಸವಾಲು ಹಾಕಿದ ಅಹಂಕಾರಿ ಪಂಡಿತರನ್ನು ವ್ಯಾಖ್ಯಾನ ವಾದದಲ್ಲಿ ಪರಾಜಯಗೊಳಿಸುವುದರಲ್ಲಿಯೇ ಕಳೆದರು. ಆ ಪಂಡಿತರಲ್ಲಿ ಬಹುತೇಕರು ಬೌದ್ಧ, ಜೈನ ಮತ್ತು ಅದ್ವೈತ ಸಂಪ್ರದಾಯಗಳಿಗೆ ಸೇರಿದವರಿರಬೇಕು. ಅವರಲ್ಲಿ ಮೊದಲು ವಾದಕ್ಕೆ ಬಂದವರು ಬೌದ್ಧ ಭಿಕ್ಷುಗಳಾದ ಬುದ್ಧಿಸಾಗರ ಮತ್ತು ವಾದಸಿಂಹ ಎಂಬುವವರು. ವಾದದಲ್ಲಿ ಸೋಲುಂಡು, ಅವರು ಸರಿರಾತ್ರಿಯಲ್ಲೇ ಅಲ್ಲಿಂದ ಯಾರಿಗೂ ತಿಳಿಯದಂತೆ ಪಲಾಯನ ಮಾಡಿದರಂತೆ! ತಮ್ಮ ಎಲ್ಲ ವಾಗ್ವಿವಾದಗಳಲ್ಲಿಯೂ ಮಧ್ವರು ಶಂಕರರು ಬಾದರಾಯಣರ ವೇದಾಂತ ಸೂತ್ರಗಳಿಗೆ ರಚಿಸಿರುವ ಭಾಷ್ಯವನ್ನು ಖಂಡಿಸಿ ಟೀಕಿಸುತ್ತಿದ್ದರು. ಇದು ವೇದಾಂತದ ಮೂಲಗ್ರಂಥಗಳಲ್ಲಿ ಒಂದು. ಹೀಗಾಗಿ ಅವರ ಗುರು ಅಚ್ಯುತಪ್ರೇಕ್ಷರೇ ಮೊದಲಾಗಿ ಹಲವಾರು ಪಂಡಿತರು, ''ನೀವೇ ಏಕೆ ಒಂದು ಭಾಷ್ಯವನ್ನು ಬರೆಯಬಾರದು?'' ಎಂದು ಕೇಳಿಕೊಂಡರು. ತಾವು ಕಾಲಾಂತರದಲ್ಲಿ ಇದನ್ನು ರಚಿಸುವುದಾಗಿ ಮಧ್ವರು ಉತ್ತರವಿತ್ತರು.

*(ಮುಂದುವರಿಯುವುದು)*



# ರಾಮಕೃಷ್ಣ ಮಿಷನ್ ಆಶ್ರಮ

(ರಾಮಕೃಷ್ಣ ಮಿಷನ್, ಬೇಲೂರು ಮಠ, ಹೌರಾ 711 002 ಇದರ ಒಂದು ಶಾಖಾಕೇಂದ್ರ)

**ಮಿಷನ್ ರಸ್ತೆ , ಆಶ್ರಮಪಾರಾ, ಜಲಪಾಯಿಗುರಿ –735101 ಪಶ್ಚಿಮ ಬಂಗಾಳ**

Phone: **8902051967, 9434344492, 03561-228388/228945**, Email: **rkmajal@gmail.com** Website: **www.rkmjalpaiguri.in**

## ಒಂದು ವಿಜ್ಞಾಪನೆ

''ಯಾರು ಇತರರಿಗಾಗಿ ಬದುಕುವರೋ, ಅವರೇ ನಿಜವಾಗಿ ಬದುಕುವವರು''

— ಸ್ವಾಮಿ ವಿವೇಕಾನಂದ

ಸ್ನೇಹಿತರೇ ಹಾಗೂ ಭಕ್ತರೇ,

ಸ್ವಾಮಿ ವಿವೇಕಾನಂದರ ಕಹಳೆ ಧ್ವನಿಗೆ ಓಗೊಟ್ಟು 1928ರಲ್ಲಿ **ಜಲಪಾಯಿಗುರಿ** ಪಟ್ಟಣದಲ್ಲಿ ಕೆಲವು ಭಕ್ತರು ಒಂದು ಆಶ್ರಮವನ್ನು ಆರಂಭಿಸಿದರು. 1941ರಲ್ಲಿ ಅದು ಬೇಲೂರು ಮಠದ ರಾಮಕೃಷ್ಣ ಮಿಷನ್‌ನ ಶಾಖಾಕೇಂದ್ರವಾಗಿ ಸೇರ್ಪಡೆಗೊಂಡಿತು. ಹಿಮಾಲಯ ಪರ್ವತ ಶ್ರೇಣಿಯ ಕೆಳಗಿನ ಹಂತದ ತಪ್ಪಲು ಪ್ರದೇಶದಲ್ಲಿ ನೆಲೆಸಿರುವ ಈ ಆಶ್ರಮವು **ನಾಲ್ಕು ರಾಷ್ಟ್ರಗಳ ನಡುವಿನ ವಿಶಿಷ್ಟ ಭೂಪ್ರದೇಶದಲ್ಲಿ** ನೆಲೆಸಿದೆ. ಹಚ್ಚಹಸಿರಿನ ರಮಣೀಯ ನೈಸರ್ಗಿಕ ಸಮೃದ್ಧಿಯಿಂದ ಕೂಡಿದ ಈ ಆಶ್ರಮವು ಸಮೀಪದ ಹಾಗೂ ದೂರದ ಅನೇಕ ಮಂದಿ ಸಾಧಕರನ್ನು ತನ್ನೆಡೆಗೆ ಆಕರ್ಷಿಸುತ್ತಿದೆ. ಸೇವಾ ಕಾರ್ಯಗಳಲ್ಲಿ ವಿದ್ಯಾರ್ಥಿ ಮಂದಿರ, ಮೌಲ್ಯ ಶಿಕ್ಷಕ ತರಬೇತಿ, ಏಕೀಕೃತ ಶಿಶು ಅಭಿವೃದ್ಧಿ ಯೋಜನೆ, ಉಚಿತ ಚಿಕಿತ್ಸಾಲಯ, ಗ್ರಂಥಾಲಯ ಹಾಗೂ ವಾಚನಾಲಯ, ಪರಿಹಾರ ಮತ್ತು ಅಭಿವೃದ್ಧಿ ಕಾರ್ಯಗಳು ಹಾಗೂ ಇನ್ನಿತರ ಯೋಜನೆಗಳು ಪ್ರಮುಖವಾಗಿವೆ.



ಸ್ವಾಮಿ ವಿವೇಕಾನಂದರು 1893ರ ಸೆಪ್ಟೆಂಬರ್ 11ರಂದು ಚಿಕಾಗೋದಲ್ಲಿ ನೀಡಿದ ನಿತ್ಯ ಸ್ಮರಣಾರ್ಹವೂ ಅತ್ಯಮೋಘವೂ ಆದ ಉಪನ್ಯಾಸಗಳು ನಡೆದ 'ಆರ್ಟ್ ಇನ್‌ಸ್ಟಿಟ್ಯೂಟ್'ಅನ್ನು ಹೋಲುವ '**ವಿವೇಕಾನಂದ ಸಭಾಗೃಹ**'ದ ನಿರ್ಮಾಣ ಮಾಡುವ ಯೋಜನೆಯನ್ನು ನಾವು ಹಾಕಿಕೊಂಡಿದ್ದೇವೆ. (ಅದರ ಮಾದರಿಯು ಚಿತ್ರದಲ್ಲಿದೆ.) ಈ ಬಹೂಪಯೋಗಿ ಕಟ್ಟಡವು 16,000 ಚದರಡಿ ಅಳತೆಯಷ್ಟು ವಿಶಾಲವಾಗಿದ್ದು, ಸುಮಾರು 1300 ಮಂದಿ ಕುಳಿತುಕೊಳ್ಳಬಹುದಾಗಿದೆ. ವಿದ್ಯಾರ್ಥಿಗಳಿಗೆ, ಯುವಕರಿಗೆ ಹಾಗೂ ಸಾರ್ವಜನಿಕರಿಗೆ ವಿಚಾರ ಸಂಕಿರಣ, ಸಭೆ–ಸಮಾರಂಭಗಳನ್ನು ಏರ್ಪಡಿಸಲು, ಮೌಲ್ಯಶಿಕ್ಷಣ ಸಾಂಸ್ಕೃತಿಕ ಆಧ್ಯಾತ್ಮಿಕ ಹಾಗೂ ಸೇವಾ ಕಾರ್ಯಗಳನ್ನು ನಡೆಸಲು ಮತ್ತು ವಿವಿಧ ಹಬ್ಬ–ಹರಿದಿನಗಳನ್ನು ಹಮ್ಮಿಕೊಳ್ಳಲು ಈ ಕಟ್ಟಡ ನೆರವಾಗಲಿದೆ. ವಿಸ್ತಾರ ಉತ್ತರ ಬಂಗಾಳದ ಹಲವು ಪ್ರದೇಶಗಳಿಂದ ಬರುವ ಅಪಾರ ಸಂಖ್ಯೆಯ ಭಕ್ತರುಗಳು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಇದರಿಂದ ಸಾಧ್ಯವಾಗುತ್ತದೆ. ಈ ಮೂಲಕ ಸ್ವಾಮಿ ವಿವೇಕಾನಂದರ '**ಮಾನವ – ನಿರ್ಮಾಣ**' ಹಾಗೂ '**ರಾಷ್ಟ್ರ ನಿರ್ಮಾಣ**'ದ ಕನಸನ್ನು ಸಾಕಾರಗೊಳಿಸಲು ಸಾಧ್ಯವಾಗುವುದು ಎಂದು ನಮ್ಮ ನಂಬಿಕೆ. ಇದರ ನಿರ್ಮಾಣಕಾರ್ಯಕ್ಕೆ ಸುಮಾರು 4.66 ಕೋಟಿ ರೂ. ಅಂದಾಜು ವೆಚ್ಚ ತಗಲುವುದು. ಇದಕ್ಕೆ ತಾವು ಉದಾರ ಧನಸಹಾಯ ನೀಡಬೇಕೆಂದು ತಮ್ಮಲ್ಲಿ ನಾವು ವಿನಂತಿಸಿಕೊಳ್ಳುತ್ತಿದ್ದೇವೆ.

ದಾನಿಗಳಲ್ಲಿ ತಮ್ಮ ಪ್ರೀತಿಪಾತ್ರರಾದವರ ಸ್ಮರಣೆಗಾಗಿ ದತ್ತಿ ನೀಡಬಯಸುವವರಿದ್ದರೆ, ಅವರ ಬಯಕೆಯನ್ನು ಈಡೇರಿಸಲು, ಅವರ ಪ್ರೀತಿ ಪಾತ್ರರಾದವರ ಹೆಸರನ್ನು ಸೂಕ್ತ ಸ್ಥಳದಲ್ಲಿ ಫಲಕಗಳ ಮೂಲಕ ಹಾಕಿಸಲಾಗುವುದು. ಆಸಕ್ತ ದಾನಿಗಳು ಈ ಕುರಿತು ಆಶ್ರಮದ ಕಾರ್ಯದರ್ಶಿಯವರನ್ನು ಸಂಪರ್ಕಿಸಬಹುದು. ಅವರ ವಿಳಾಸ: **The Secretary, Ramakrishna Mission Ashrama, Ashramapara, Mission Road, Jalapaiguri - 735101, West Bengal, India.**

ದೇಣಿಗೆಗಳನ್ನು A/C Payee ಚೆಕ್, ಡ್ರಾಫ್ಟ್, ಮನಿ ಆರ್ಡರ್ ಮೂಲಕ ಕಳುಹಿಸಬಹುದು. ಅವುಗಳನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿ, ಸ್ವೀಕೃತಿ ಪತ್ರವನ್ನು ಕಳುಹಿಸುತ್ತೇವೆ. ಚೆಕ್, ಡ್ರಾಫ್ಟ್‌ಗಳನ್ನು ಕಳುಹಿಸಬೇಕಾದ ವಿಳಾಸ: **Ramakrishna Mission Ashrama, Jalapaiguri.**

**ಈ ಧನಸಹಾಯಗಳಿಗೆ 1961ರ ಆದಾಯ ತೆರಿಗೆ ಕಾಯಿದೆಯನ್ವಯ u/s 80-G ತೆರಿಗೆ ವಿನಾಯಿತಿ ಅನ್ವಯವಾಗುತ್ತದೆ.**

| Payment may be made by Bank Transfer (within INDIA) | Payment may be made by Bank Transfer (in respect of Foreign Countries) |
|---|---|
| Bank Details: | Bank Details: |
| State Bank of India, Jalpaiguri Branch, Club Road, Jalpaiguri: 735101 | State Bank of India, **Jalpaiguri Branch, Club Road,** Jalpaiguri: 735101 |
| Savings Bank A/C no. **11188188101**; IFSC Code: **SBINOOOO95** | savings Bank A/C no. **11188171550**; IFSC Code: **SBINOOOO95** |
| MICR No: **735002095** Branch Code: **SBI Jalpaiguri** | MICR No: **735002095** Branch Code: **SBI Jalpaiguri** |

**ಆನ್‌ಲೈನ್ ಮೂಲಕ ಹಣಪಾವತಿ:** ಆನ್‌ಲೈನ್ ಮೂಲಕ ಹಣವನ್ನು ವರ್ಗಾಯಿಸಿದ ತಕ್ಷಣವೇ rkmajal@gmail.com ಈ ವಿಳಾಸಕ್ಕೆ ತಮ್ಮ ಹೆಸರು, ಪೂರ್ಣ ಅಂಚೆ ವಿಳಾಸ, PAN No. ಹಾಗೂ ವರ್ಗಾಯಿಸಿದ ಮೊತ್ತ – ಈ ವಿವರಗಳನ್ನು ನಮಗೆ ತಿಳಿಸಲು ಕೋರುತ್ತೇವೆ.

ಈ ಉದಾತ್ತ ಯೋಜನೆಗಾಗಿ ನೀವು ಮಾಡುವ ಧನಸಹಾಯವು ದೂರಗಾಮಿಯೂ, ನಿರ್ಮಾಣಕಾರ್ಯ ಪೂರ್ಣಗೊಳ್ಳುವ ತನಕ ಸಹಕಾರಿಯೂ ಆಗಿರುವುದರಲ್ಲಿ ಯಾವುದೇ ಸಂದೇಹವಿಲ್ಲ.

ಶ್ರೀರಾಮಕೃಷ್ಣರು ನಿಮ್ಮ ಮೇಲೆ ಸದಾ ಕೃಪೆದೋರಿ ಹರಸಲಿ ಎಂಬುದೇ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.

ಜಲಪಾಯಿಗುರಿ

ಡಿಸೆಂಬರ್ ೯, ೨೦೧೭

ಇತಿ ಭಗವತ್ಸೇವೆಯಲ್ಲಿ ತಮ್ಮ

ಸ್ವಾಮಿ ಶಿವಪ್ರೇಮಾನಂದ

ಕಾರ್ಯದರ್ಶಿಗಳು

# ಪಂಡರಾಪುರದ ಇತಿಹಾಸ

**ಕಥೆ : ಮೋಹನಾ ಸೂರ್ಯನಾರಾಯಣ** **ಚಿತ್ರ: ಶಂಕರ್**

**1** ಮಹಾರಾಷ್ಟ್ರದಲ್ಲಿ ಪುಂಡಲೀಕನೆಂಬುವನೊಬ್ಬನಿದ್ದ. ಅವನು ತನ್ನ ಪತ್ನಿಯ ಮಾತು ಕೇಳಿ ತನ್ನ ಹೆತ್ತವರನ್ನು ತುಂಬಾ ಕಠಿಣವಾಗಿ ನಡೆಸಿಕೊಳ್ಳುತ್ತಿದ್ದ. ಒಂದು ಬಾರಿ ಪುಂಡಲೀಕನು ತನ್ನ ಕುಟುಂಬದೊಂದಿಗೆ ವಾರಣಾಸಿಗೆ ಯಾತ್ರೆ ಹೊರಟ.

**2**




**3** ಅವರು ರಾತ್ರಿ ಒಂದು ಆಶ್ರಮದ ಗುಡಿಸಿಲಿನ ಬಳಿ ತಂಗಿದ್ದರು. ಅಲ್ಲಿ ಕುಕ್ಕುಟ ಸ್ವಾಮಿ ಎಂಬ ಸಂನ್ಯಾಸಿಯೊಬ್ಬನಿದ್ದ. ನಿದ್ದೆ ಬಾರದ ಕಾರಣ ಪುಂಡಲೀಕ ಹೊರಗೆ ಬಂದು ಸುತ್ತಾಡುತ್ತಿದ್ದ. ಬೆಳದಿಂಗಳ ಮಂದ ಬೆಳಕಿನಲ್ಲಿ ಅವನು ಮಲಿನ ವಸ್ತ್ರ ಧರಿಸಿದ್ದ ಕುರೂಪಿ ಹೆಂಗಸರನ್ನು ಕಂಡ. ಅವರು ಆಶ್ರಮದ ಮುಂಬಾಗಿಲ ಬಳಿ ಗುಡಿಸುತ್ತಿದ್ದರು.



**4** ಸ್ವಲ್ಪ ಹೊತ್ತಿನ ನಂತರ ಮೂರು ಮಂದಿ ದಿವ್ಯ ಸ್ತ್ರೀಯರು ಕಾಣಿಸಿಕೊಂಡರು. ಅವನು ಅವರಿಗೆ ನಮಸ್ಕರಿಸಿದ.



5




6




ಪುಂಡಲೀಕನು ತನ್ನ ಹೆತ್ತವರ ಕಾಲಿಗೆ ಬಿದ್ದು, ಬಹಳ ದೀರ್ಘಕಾಲ ಅತ್ತು ಪ್ರಾರ್ಥಿಸಿದ; ಅವರ ಕ್ಷಮೆ ಕೋರಿದ. ಅವರು ಕೂಡ ಅವನನ್ನು ಕ್ಷಮಿಸಿದರು.

7 ಪುಂಡಲೀಕನು ಚಂದ್ರಭಾಗಾ ನದಿಯ ತೀರದಲ್ಲಿ ಒಂದು ಆಶ್ರಮವನ್ನು ಕಟ್ಟಿದ. ಅಲ್ಲಿಗೆ ಅವನು ತನ್ನ ಹೆತ್ತವರನ್ನು ಕರೆತಂದು, ಅವರನ್ನು ಪ್ರೀತಿಯಿಂದ ಸೇವೆ ಮಾಡತೊಡಗಿದ. ಅವನ ಪತ್ನಿಗೂ ತನ್ನ ತಪ್ಪಿನ ಅರಿವಾಯಿತು.

8 ಪುಂಡಲೀಕನು ತನ್ನ ಹೆತ್ತವರ ಸೇವೆ ಮಾಡುತ್ತಿದ್ದ ವಿಷಯವನ್ನು ಕೇಳಿದ ಶ್ರೀಕೃಷ್ಣನು ತನ್ನ ಪತ್ನಿ ರುಕ್ಮಿಣಿಯೊಂದಿಗೆ ಅಲ್ಲಿಗೆ ಬಂದ.




ಆದರೆ ಕೃಷ್ಣ ಅಲ್ಲಿ ಕುಳಿತುಕೊಳ್ಳಲಿಲ್ಲ, ಅಲ್ಲೇ ತನ್ನ ಸೊಂಟದ ಮೇಲೆ ಕೈಯಿಟ್ಟುಕೊಂಡು ನಿಂತ.

**9**

ಆ ಕಲ್ಲಿಗೂ ಒಂದು ಕಥೆಯಿತ್ತು. ಶುಕ್ರನ ಮಗನಾದ ತ್ವಷ್ಟೃವು ಇಂದ್ರಪದವಿಯನ್ನು ಬಯಸಿ, ಅವನನ್ನು ಕೊಲ್ಲಬೇಕೆಂದು ವೃತ್ರಾಸುರನ ಸಹಾಯ ಕೇಳಿದ. ಅವನು ದರ್ಪದಿಂದ ಹೇಳಿದ...




ವೃತ್ರಾಸುರ ಹಾಗೆ ಮಾಡಿದ  ಇಂದ್ರನನ್ನು ನುಂಗಿಬಿಟ್ಟ.

**10**

ಮುಂದೆ ದೇವತೆಗಳು ವೃತ್ರನ ಮೇಲೆ ಜೃಂಬೀಕವೆಂಬ ಅಸ್ತ್ರವನ್ನು ಪ್ರಯೋಗಿಸಿದರು. ಅದರ ಹೊಡೆತಕ್ಕೆ ವೃತ್ರನು ಆಕಳಿಸಿದ; ಆಗ ಇಂದ್ರನು ಸೂಕ್ಷ್ಮರೂಪ ತಾಳಿ ಹೊರಬಿದ್ದು, ದೂರ ಓಡಿ ಹೋದ. ಮುಂದೆ ವೃತ್ತನಿಗೂ ಇಂದ್ರನಿಗೂ ಸಂಧಾನವಾಯಿತು. ಆದರೆ ಇಂದ್ರನಿಗೆ ವೃತ್ರನ ಮೇಲಿದ್ದ ಕೋಪ ಹೋಗಲೇ ಇಲ್ಲ.



**11**




ಇಂದ್ರನ ಪ್ರಾರ್ಥನೆಯ ಫಲವಾಗಿ ವಿಷಪೂರಿತವಾದ ನೊರೆಯಂಥ ಒಂದು ವಸ್ತು ಸಮುದ್ರದಿಂದ ಮೇಲೆದ್ದು ಬಂತು. ಅದನ್ನು ಇಂದ್ರನು ತನ್ನ ವಜ್ರವೆಂಬ ಆಯುಧಕ್ಕೆ ಲೇಪಿಸಿ ಆ ರಾಕ್ಷಸನನ್ನು ಕೊಂದ.

**12**



**13** ಆ ಕಲ್ಲು ಇದ್ದ ಸ್ಥಳದಲ್ಲೇ ಪುಂಡಲೀಕನ ಆಶ್ರಮವಿತ್ತು. ಅಲ್ಲಿಗೆ ಬಂದ ಶ್ರೀಕೃಷ್ಣನು ಆ ಕಲ್ಲಿನ ಮೇಲೆ ಆಕಸ್ಮಿಕವಾಗಿ ನಿಂತ. ಶ್ರೀಕೃಷ್ಣನ ಸ್ಪರ್ಶದಿಂದ ಶಾಪವಿಮೋಚನೆಯಾಗಿ, ಇಂದ್ರನು ಮೇಲೆದ್ದು ನಿಂತ.




**14** ತನ್ನ ಹೆತ್ತವರ ಸೇವೆ ಮಾಡಿ ಮುಗಿಸಿದ ಪುಂಡಲೀಕನು ಶ್ರೀಕೃಷ್ಣನ ಬಳಿಗೆ ಬಂದು, ಅವನಿಗೆ ನಮಸ್ಕರಿಸಿ, ಅವನ ಕ್ಷಮೆ ಕೇಳಿದ.




ಪುಂಡಲೀಕನ ಹೆಸರಿನಿಂದಲೇ ಆ ಪ್ರದೇಶಕ್ಕೆ ಪುಂಡರೀಕಪುರ ಎಂದು ಹೆಸರಾಯಿತು. ಮುಂದೆ ಅದೇ ಪಂಡರಾಪುರ ಎಂದಾಯಿತು. ಶ್ರೀಕೃಷ್ಣನೇ ನಿಂತ ಶಿಲೆಯಾದ್ದರಿಂದ ಆ ಕಲ್ಲನ್ನು ಅವನು ವಿಠಲ ಎಂದು ಪೂಜಿಸಿದ, ವಿಠ್ ಎಂದರೆ ಕಲ್ಲು ಎಂದರ್ಥ.



ತಂದೆತಾಯಿಗಳೇನು ಕಸಕಡ್ಡಿಗಳೆ? ಅವರು ಸುಪ್ರೀತರಾದ ಹೊರತು ಸಾಧನೆಯ ಕರ್ಮಗಳಾವುವೂ ಫಲ ಬಿಡಲಾರವು. ಚೈತನ್ಯದೇವ ಯಾವಾಗ ನೋಡಿದರೂ ಪ್ರೇಮೋನ್ಮತ್ತನಾಗಿರುತ್ತಿದ್ದ. ಆದರೂ ಸಂನ್ಯಾಸ ತೆಗೆದುಕೊಳ್ಳುವ ಮುನ್ನ ಎಷ್ಟೊಂದು ದಿನ ಆತ ತನ್ನ ತಾಯಿಗೆ ಸಮಾಧಾನ ಹೇಳಬೇಕಾಯಿತು! ಆತ ಆಕೆಗೆ ಹೇಳಿದ: ‘ಅಮ್ಮಾ, ವ್ಯಸನ ಪಡಬೇಡ, ಆಗಾಗ ಬಂದು ನೋಡಿ ಹೋಗುತ್ತೇನೆ.’

– ಶ್ರೀರಾಮಕೃಷ್ಣರು



# ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ
# ವಾರ್ಷಿಕ ವರದಿಯ ಸಾರಾಂಶ - 2016-2017

ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ **೧೦೮-ನೇ ವಾರ್ಷಿಕ ಸಾಧಾರಣ ಸಭೆಯು** ರವಿವಾರ, ದಿನಾಂಕ ೧೭ನೇ ಡಿಸೆಂಬರ್ ೨೦೧೭ ರಂದು ಮಧ್ಯಾಹ್ನ ೩.೩೦ ಕ್ಕೆ ಬೇಲೂರು ಮಠದಲ್ಲಿ ನೆರವೇರಿತು.

**ರಾಂಚಿ ಮೊರಾಬಾದಿ** ಆಶ್ರಮದ ದಿವ್ಯಾಯನ ಕೃಷಿ ವಿಜ್ಞಾನ ಕೇಂದ್ರಕ್ಕೆ ನವದೆಹಲಿಯಲ್ಲಿರುವ ಭಾರತೀಯ ಕೃಷಿ ಸಂಶೋಧನ ಮಂಡಲಿಯು ಪ್ರಾದೇಶಿಕ ಹಂತದ **ಪಂಡಿತ್ ದೀನದಯಾಳ ಉಪಾಧ್ಯಾಯ ರಾಷ್ಟ್ರೀಯ ಕೃಷಿ ವಿಜ್ಞಾನ ಪ್ರೋತ್ಸಾಹನ** ಪುರಸ್ಕಾರವನ್ನು ನೀಡಿದೆ. ನವದೆಹಲಿಯ ಭಾರತೀಯ ವಯಸ್ಕರ ಶಿಕ್ಷಣ ಸಂಘವು **ನರೇಂದ್ರಪುರ** ಆಶ್ರಮದ ಲೋಕ ಶಿಕ್ಷಾ ಪರಿಷತ್ತನ್ನು ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ನೀಡಿದ ಕೊಡುಗೆಗಾಗಿ **ನೆಹರೂ ಸಾಕ್ಷರ ಪ್ರಶಸ್ತಿ**ಗೆ ಆಯ್ಕೆ ಮಾಡಿದೆ. **ನರೇಂದ್ರಪುರ** ಆಶ್ರಮದ ಅಂಧ ಬಾಲಕರ ಅಕಾಡೆಮಿ ಹಾಗೂ ಬ್ರೈಲ್ ಮುದ್ರಣಾಲಯ ಈ ಸಂಸ್ಥೆಗಳು ಅಂಗವಿಕಲರಿಗೆ ನೀಡುತ್ತಿರುವ ಸಮಗ್ರ ಸೇವಾಕಾರ್ಯಗಳಿಗಾಗಿ ರಾಷ್ಟ್ರೀಯ **ಅಂಗವಿಕಲರ ಸಬಲೀಕರಣ ಪ್ರಶಸ್ತಿ** ಲಭಿಸಿದೆ. ಗುಂಟೂರಿನ ಬೊಮ್ಮಿಡಾಲ ಶ್ರೀಕೃಷ್ಣಮೂರ್ತಿ ಫೌಂಡೇಶನ್ ಸಂಸ್ಥೆಯು **ರಾಜಮಹೇಂದ್ರ ವರಂ** ಶಾಖಾಕೇಂದ್ರಕ್ಕೆ **ಸ್ಫೂರ್ತಿ ಪ್ರಶಸ್ತಿ**ಯನ್ನು ನೀಡಿತು.

ಸ್ವಾಮಿ ಶಾರದಾನಂದ, ಸ್ವಾಮಿ ಅಖಂಡಾನಂದ, ಸ್ವಾಮಿ ಅಭೇದಾನಂದ, ಸ್ವಾಮಿ ಸುಬೋಧಾನಂದ ಹಾಗೂ ಸೋದರಿ ನಿವೇದಿತಾ ಅವರ ೧೫೦ನೇ ಜನ್ಮ ಶತಮಾನೋತ್ಸವವನ್ನು ವಿವಿಧ ಶಾಖಾಕೇಂದ್ರಗಳಲ್ಲಿ ಹಲವು ಕಾರ್ಯಕ್ರಮಗಳೊಂದಿಗೆ ಆಚರಿಸಲಾಯಿತು.

ಮಧ್ಯಪ್ರದೇಶದ **ಗ್ವಾಲಿಯರ್**ನಲ್ಲಿ ರಾಮಕೃಷ್ಣ ಮಿಷನ್ನಿನ ಹೊಸ ಶಾಖಾಕೇಂದ್ರ ಹಾಗೂ ನವದೆಹಲಿಯ **ವಸಂತ ವಿಹಾರ**, ಒಡಿಶಾದ **ಕಟಕ್**, ಪಶ್ಚಿಮ ಬಂಗಾಳದ **ವರ್ಧಮಾನ** - ಈ ಮೂರು ಪ್ರದೇಶಗಳಲ್ಲಿ ಮಿಷನ್ನಿನ ಉಪ-ಕೇಂದ್ರಗಳನ್ನು ಆರಂಭಿಸಲಾಯಿತು. ಕೇರಳದ **ಕಾಯಂಕುಳಂ** ಹಾಗೂ ತಮಿಳುನಾಡಿನ **ರಾಮನಾಥಪುರಂ** ಗಳಲ್ಲಿ ರಾಮಕೃಷ್ಣ ಮಠದ ಹೊಸ ಶಾಖಾಕೇಂದ್ರಗಳನ್ನು ಹಾಗೂ ಕೊಲ್ಕತ್ತದ **ಕಥಾಮೃತ ಭವನ**ದಲ್ಲಿ ಉಪ-ಕೇಂದ್ರವನ್ನು ಆರಂಭಿಸಲಾಯಿತು. ಹೊರದೇಶದಲ್ಲಿ, ಬಾಂಗ್ಲಾದೇಶದ **ಚಂದ್‌ಪುರ್**ನಲ್ಲಿ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಹೊಸ ಕೇಂದ್ರವನ್ನು ಆರಂಭಿಸಲಾಯಿತು. ಅಮೆರಿಕಾ ಸಂಯುಕ್ತ ಸಂಸ್ಥಾನದ ಗ್ರೇಟರ್ **ಹ್ಯೂಸ್ಟನ್** ನಲ್ಲಿರುವ ವೇದಾಂತ ಸೊಸೈಟಿಯನ್ನು ರಾಮಕೃಷ್ಣ ಮಠದ ಶಾಖಾಕೇಂದ್ರವನ್ನಾಗಿ ಮಾಡಲಾಯಿತು. ಝಾಂಬಿಯಾದ **ಲುಸಾಕಾ**ದಲ್ಲಿರುವ ರಾಮಕೃಷ್ಣ ವೇದಾಂತ ಸೆಂಟರನ್ನು ರಾಮಕೃಷ್ಣ ಮಿಷನ್ನಿಗೆ ಮತ್ತೆ ಸೇರ್ಪಡೆಗೊಳಿಸಲಾಯಿತು.

### ಶೈಕ್ಷಣಿಕ ಕ್ಷೇತ್ರದಲ್ಲಿ ಈ ಕೆಳಗಿನ **ಹೊಸ ಪ್ರಗತಿಗಳು** ಉಲ್ಲೇಖನೀಯ:

(೧) **ಕೊಯಮತ್ತೂರು ಮಿಷನ್** *Journal of Disability Management and Special Education* ಎಂಬ ಅಂತರ್ಜಾಲ ಪತ್ರಿಕೆಯನ್ನು ಆರಂಭಿಸಿತು. (೨) **ನರೇಂದ್ರಪುರ** ಆಶ್ರಮದಲ್ಲಿರುವ ಕೈಗಾರಿಕಾ ತರಬೇತಿ ಕೇಂದ್ರವು ಮೂರು ಹೊಸ ಕೋರ್ಸ್‌ಗಳನ್ನು ಆರಂಭಿಸಿತು.

### ವೈದ್ಯಕೀಯ ಕ್ಷೇತ್ರದಲ್ಲಿ ಈ ಕೆಳಗಿನ **ಹೊಸ ಪ್ರಗತಿಗಳು** ಉಲ್ಲೇಖನೀಯ:

(೧) **ಇಟಾನಗರ** ಕೇಂದ್ರವು ಮೂರು ಹೊಸ ವಿಭಾಗಗಳನ್ನು ಆರಂಭಿಸಿತು (ಪ್ರತ್ಯುತ್ಪಾದನಾ ಔಷಧಿ ವಿಭಾಗ (ಬಂಜೆತನ ನಿವಾರಣೆಗಾಗಿ), ಯೂರೋಲಜಿ-ರಿನಲ್ ಟ್ರಾನ್ಸ್‌ಪ್ಲಾಂಟೇಶನ್ ವಿಭಾಗ ಹಾಗೂ ಯೋಗ ಮತ್ತು ಪ್ರಕೃತಿ ಚಿಕಿತ್ಸೆ ವಿಭಾಗ).(೨) **ಲಕ್ನೋ** ಕೇಂದ್ರದ ಆಸ್ಪತ್ರೆಯು ೭ ಮೊಡ್ಯುಲರ್ ಅಪರೇಷನ್ ಥಿಯೇಟರ್‌ಗಳನ್ನು ಆರಂಭಿಸಿತು. (೩) ಕೊಲ್ಕತ್ತಾದ **ಸೇವಾ ಪ್ರತಿಷ್ಠಾನ**ವು ಆಧುನಿಕ ಯಂತ್ರೋಪಕರಣಗಳಿರುವ ಒಂದು ಹೈ ಡಿಪೆಂಡೆನ್ಸಿ ಯೂನಿಟ್ (ICUಗಿಂತ ಒಂದು ಹಂತ ಕೆಳಗಿನದು)ಅನ್ನು ಸ್ಥಾಪಿಸಿತು.

### ಗ್ರಾಮೀಣಾಭಿವೃದ್ಧಿ ಕ್ಷೇತ್ರದಲ್ಲಿ ಈ ಕೆಳಗಿನ **ಹೊಸ ಯೋಜನೆಗಳು** ಉಲ್ಲೇಖನೀಯ:

(೧) **ಗ್ವಾಲಿಯರ್** ಕೇಂದ್ರವು ೧೫೦ ಮಂದಿ ಕೃಷಿಕರಿಗಾಗಿ ಶಿಬಿರವೊಂದನ್ನು ಏರ್ಪಡಿಸಿತ್ತು; ಇದರ ಅಂಗವಾಗಿ ಶಾರದಾ ಬಾಲ ಗ್ರಾಮದಲ್ಲಿ ೮೦೦ ಗಿಡಗಳನ್ನು ನೆಡಲಾಯಿತು. (೨) **ಲಕ್ನೋ** ಕೇಂದ್ರವು ಗ್ರಾಮೀಣ ಆರೋಗ್ಯ ಕೇಂದ್ರವೊಂದನ್ನು ಆರಂಭಿಸಿತು. (೩) **ನಾರಾಯಣಪುರ** ಕೇಂದ್ರವು ಮಕ್ಕಳಿಗಾಗಿ ೧೦ ಹಾಸಿಗೆಗಳಿರುವ ೨ ನಿವಾಸಗಳನ್ನು ಹಾಗೂ ೪೫ ನೀರಿನ ತೊಟ್ಟಿಗಳನ್ನು ನಿರ್ಮಿಸಿಕೊಟ್ಟಿತು. (೪) **ನವದೆಹಲಿ** ಕೇಂದ್ರವು ೧೦೦ ಟಿಪಿಪಿಎಫ್ ಶೌಚಾಲಯಗಳನ್ನು ನಿರ್ಮಿಸಿಕೊಟ್ಟಿತು. (೫) **ರಾಂಚಿ ಮೊರಾಬಾದಿ** ಕೇಂದ್ರವು ೨೦೦ ಮಹಿಳಾ ಸ್ವ-ಸಹಾಯ ಪಂಗಡಗಳ ಸಬಲೀಕರಣಕ್ಕಾಗಿ ಜೀವನ ಹಾಗೂ ಉದ್ಯಮ ಬೆಳವಣಿಗೆ ಕಾರ್ಯಕ್ರಮ (LEDP) ವನ್ನು ಆರಂಭಿಸಿದೆ. ಈ ಆಶ್ರಮವು ೨೭ ನದೇಪ್ ಕಂಪೋಸ್ಟ್ ಟ್ಯಾಂಕಿಗಳನ್ನೂ, ೫೭ ಎತ್ತರದ ಆಡುಸಾಕಣೆಯ ಅಟ್ಟಣೆಗಳನ್ನೂ ನಿರ್ಮಿಸಿದೆ; ಹಾಗೂ ನೀರಾವರಿಗಾಗಿ ಸೌರ ಪಂಪುಗಳನ್ನೂ ನಿರ್ಮಿಸಿದೆ. (೬) **ಸಾರ್ಗಾಛಿ** ಆಶ್ರಮವು ಕೃಷಿಕರಿಗಾಗಿ ಮಣ್ಣಿನ ತಪಾಸಣೆಯ ಪ್ರಯೋಗಶಾಲೆಗಳನ್ನು ಆರಂಭಿಸಿದೆ.

ಹಲವಾರು ಶಾಖಾಕೇಂದ್ರಗಳು ಸ್ವಚ್ಛ ಭಾರತ ಅಭಿಯಾನವನ್ನು ವಿವಿಧ ಕಾರ್ಯಕ್ರಮಗಳೊಂದಿಗೆ ಆರಂಭಿಸಿವೆ. ಅವುಗಳಲ್ಲಿ ಉಲ್ಲೇಖಾರ್ಹವಾದವುಗಳು: (೧) **ಕೊಯಮತ್ತೂರು ಮಿಷನ್** ವಿದ್ಯಾಲಯದ ವಿವಿಧ ವಿದ್ಯಾಸಂಸ್ಥೆಗಳು ೪೬ ಸ್ವಚ್ಛತಾ ಕಾರ್ಯಕ್ರಮಗಳನ್ನು ನಡೆಸಿದ್ದು, ಹಲವು ಸಾರ್ವಜನಿಕ ಸ್ಥಳಗಳನ್ನು ಸ್ವಚ್ಛಗೊಳಿಸಲಾಯಿತು. (೨) **ಗ್ವಾಲಿಯರ್** ಕೇಂದ್ರದ ವಿದ್ಯಾರ್ಥಿಗಳು ಮೆರವಣಿಗೆಯಲ್ಲಿ ಭಾಗವಹಿಸಿದ್ದು, ಸ್ವಚ್ಛತಾ ಅಭಿಯಾನವನ್ನು ಕುರಿತ ನಾಟಕವೊಂದನ್ನು ಏರ್ಪಡಿಸಿತ್ತು. ಈ ನಾಟಕವು ೧೧೭ ದೇಶಗಳಲ್ಲಿ ಪ್ರದರ್ಶನಗೊಂಡಿತು. (೩) **ಮಂಗಳೂರು** ಆಶ್ರಮವು ೩೦೦ ಸ್ವಚ್ಛತಾ ಕಾರ್ಯಕ್ರಮಗಳನ್ನು ನಡೆಸಿದ್ದು, ಸುಮಾರು ೩೫,೦೦೦ ಮಂದಿ ಇದರಲ್ಲಿ ಭಾಗವಹಿಸಿದರು.

**ರಾಮಕೃಷ್ಣ ಮಠಕ್ಕೆ ಸಂಬಂಧಿಸಿದಂತೆ ಈ ಕೆಳಗಿನ ಹೊಸ ಯೋಜನೆಗಳು ಉಲ್ಲೇಖನೀಯ:**

(೧) **ತಿರುವನಂತಪುರ** ಕೇಂದ್ರವು ೫ ಅಪರೇಷನ್ ಥಿಯೇಟರುಗಳಿರುವ ಬ್ಲಾಕ್ ಒಂದನ್ನು ನಿರ್ಮಿಸಿದೆ. (೨) **ಚೆನ್ನೈ** ಮಠವು ಗ್ರಾಮೀಣ ಅಭಿವೃದ್ಧಿ ಕೇಂದ್ರಕ್ಕಾಗಿ ಚೆನ್ನೈ ಸಮೀಪದ ಮೆಯ್ಯೂರ್ ಗ್ರಾಮದಲ್ಲಿ ಒಂದು ಕಟ್ಟಡವನ್ನು ನಿರ್ಮಿಸಿತು. (೩) **ಬೇಲೂರು ಮಠದ** ಆವರಣದಲ್ಲಿ ಭೋಜನಶಾಲೆಯನ್ನು ಒಳಗೊಂಡ ಬೃಹತ್ ಅಡುಗೆಮನೆಯ ಕಟ್ಟಡವನ್ನು ನಿರ್ಮಿಸಿದ್ದು, 'ಮಾ ಶಾರದಾ ಸದಾವ್ರತ' ಎಂಬ ಹೆಸರಿನಲ್ಲಿ ಕಾರ್ಯಾರಂಭ ಮಾಡಿದೆ. (೪) **ಮೈಸೂರು** ಆಶ್ರಮವು ಮೈಸೂರು ನಗರದ ೫೬ ಪ್ರದೇಶಗಳಲ್ಲಿ ಸ್ವಚ್ಛತಾ ಕಾರ್ಯಕ್ರಮಗಳನ್ನು ನಡೆಸಿತು.

**ಭಾರತದ ಹೊರಗೆ** ಈ ಕೆಳಗಿನ **ಹೊಸ ಯೋಜನೆಗಳು** ವಿಶೇಷವಾಗಿ ಉಲ್ಲೇಖನೀಯ:

(೧) **ಢಾಕಾ** ಕೇಂದ್ರವು (ಬಾಂಗ್ಲಾದೇಶ) ತನ್ನ ಶತಮಾನೋತ್ಸವವನ್ನು ವಿವಿಧ ಕಾರ್ಯಕ್ರಮಗಳೊಂದಿಗೆ ನೆರವೇರಿಸಿತು. ಈ ಸಂದರ್ಭದಲ್ಲಿ *ಪ್ರಬೋಧನ್* ಎಂಬ ಬಂಗಾಳಿ ತ್ರೈಮಾಸಿಕವನ್ನೂ ಆರಂಭಿಸಿತು. (೨) **ಡರ್ಬನ್** (ದಕ್ಷಿಣ ಆಫ್ರಿಕಾ) ಕೇಂದ್ರ ಹಾಗೂ ಅದರ ಉಪ-ಕೇಂದ್ರವಾದ **ಲೇಡಿಸ್ಮಿತ್** ನಲ್ಲಿ ಸ್ವಾಮಿ ವಿವೇಕಾನಂದರ ಮೂರ್ತಿಯನ್ನು ಸ್ಥಾಪಿಸಲಾಯಿತು. (೩) **ಸ್ಯಾನ್ ಫ್ರಾನ್ಸಿಸ್ಕೋ** (ಯು.ಎಸ್.ಎ.) ಕೇಂದ್ರದ ಹಳೆಯ ದೇವಾಲಯವನ್ನು ನವೀಕರಿಸಿ ಪುನರ್‌ಪ್ರತಿಷ್ಠಾಪನೆ ಮಾಡಲಾಯಿತು. ಈ ಸಂದರ್ಭದಲ್ಲಿ ಒಂದು ಸ್ಮರಣಸಂಚಿಕೆಯನ್ನೂ ಹೊರತರಲಾಯಿತು.

ಈ ವರ್ಷದ ಅವಧಿಯಲ್ಲಿ ರಾಮಕೃಷ್ಣ ಮಿಷನ್ ಕೈಗೊಂಡ **ಸಮಾಜ ಕಲ್ಯಾಣ ಕಾರ್ಯಕ್ರಮಗಳ** ಅಡಿಯಲ್ಲಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ವೃದ್ಧರಿಗೆ, ರೋಗಿಗಳಿಗೆ ಹಾಗೂ ನಿರ್ಗತಿಕರಿಗೆ ಆರ್ಥಿಕ ನೆರವು ಇತ್ಯಾದಿಗಳನ್ನು ನೀಡಲಾಯಿತು. ಇವುಗಳಿಗೆ ೧೯.೬೭ ಕೋಟಿ ರೂಪಾಯಿಗಳು ವಿನಿಯೋಗವಾಗಿವೆ.

**ವೈದ್ಯಕೀಯ ಸೇವೆ**ಗಳನ್ನು ೭೦.೬೯ ಲಕ್ಷಕ್ಕಿಂತ ಹೆಚ್ಚು ಜನರಿಗೆ ೧೦ ಆಸ್ಪತ್ರೆಗಳು, ೭೮ ಚಿಕಿತ್ಸಾಲಯಗಳು, ೪೧ ಸಂಚಾರಿ ವೈದ್ಯಕೀಯ ಘಟಕಗಳು ಹಾಗೂ ೮೩೪ ವೈದ್ಯಕೀಯ ಶಿಬಿರಗಳ ಮೂಲಕ ನೀಡಲಾಯಿತು. ಇದಕ್ಕೆ ೧೯೧.೪೮ ಕೋಟಿ ರೂಪಾಯಿಗಳನ್ನು ವ್ಯಯ ಮಾಡಲಾಗಿದೆ.

ಶಿಶುವಿಹಾರದಿಂದ ಹಿಡಿದು ವಿಶ್ವವಿದ್ಯಾಲಯದವರೆಗಿರುವ ನಮ್ಮ ವಿದ್ಯಾಸಂಸ್ಥೆಗಳಲ್ಲಿ, ಹಾಗೂ ಅಸಾಂಪ್ರದಾಯಿಕ ಶಿಕ್ಷಣ ವಿಭಾಗಗಳು, ರಾತ್ರಿ ಶಾಲೆಗಳು, ಖಾಸಗಿ ತರಗತಿಗಳು ಇತ್ಯಾದಿಗಳಲ್ಲಿ ಸುಮಾರು ೨.೩೨ ಲಕ್ಷ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಶಿಕ್ಷಣ ಪಡೆಯುತ್ತಿದ್ದಾರೆ. ಈ **ಶೈಕ್ಷಣಿಕ ಕಾರ್ಯಕ್ರಮ**ಗಳಿಗೆ ಒಟ್ಟು ೩೧೩.೩೩ ಕೋಟಿ ರೂಪಾಯಿಗಳು ವಿನಿಯೋಗವಾಗಿವೆ.

**ಗ್ರಾಮೀಣ ಹಾಗೂ ಬುಡಕಟ್ಟು ಜನಾಂಗದವರಿಗಾಗಿ** ನಡೆಸಿದ ಹಲವಾರು **ಅಭಿವೃದ್ಧಿ ಯೋಜನೆ**ಗಳಿಗೆ ೬೮.೦೪ ಕೋಟಿ ರೂಪಾಯಿಗಳನ್ನು ವ್ಯಯ ಮಾಡಲಾಯಿತು. ಸುಮಾರು ೭೩.೦೪ ಲಕ್ಷ ಜನರು ಇದರ ಲಾಭ ಪಡೆದರು.

ದೇಶದ ವಿವಿಧ ಭಾಗಗಳಲ್ಲಿ ಹಲವಾರು **ಪರಿಹಾರ ಮತ್ತು ಪುನರ್ವಸತಿ ನಿರ್ಮಾಣ** ಕಾರ್ಯಗಳನ್ನು ಹಮ್ಮಿಕೊಳ್ಳಲಾಯಿತು. ಸುಮಾರು ೪೧.೦೮ ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಡೆದ ಈ ಕಾರ್ಯಗಳಿಂದ ೫.೮೬ ಲಕ್ಷ ಕುಟುಂಬಗಳಿಗೆ ಸೇರಿದ ೧೧.೬೫ ಲಕ್ಷ ಜನರು ನೆರವನ್ನು ಪಡೆದಿದ್ದಾರೆ.

ಈ ಸಂದರ್ಭದಲ್ಲಿ ಸಂಸ್ಥೆಯ ಎಲ್ಲ ಸದಸ್ಯರಿಗೂ, ಸ್ನೇಹಿತರಿಗೂ ಅವರ ಸಹಾಯ-ಸಹಕಾರಗಳಿಗಾಗಿ ನಮ್ಮ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

೧೭ ಡಿಸೆಂಬರ್, ೨೦೧೭ (ಸ್ವಾಮಿ ಸುವೀರಾನಂದ)

ಪ್ರಧಾನ ಕಾರ್ಯದರ್ಶಿ

Managing Editor : Swami Atmajnananda Editor : Swami Jnanayogananda
Printed and Published by Swami Atmajnananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

## ಶಿವರಾತ್ರಿಹಬ್ಬದ ಶುಭಾಶಯಗಳು

# ಆರ್ಕಿಡ್ ಟ್ರಾವೆಲ್ & ಟೂರ್ಸ್






## ಹಿರಿಯರಿಗೆ ವಿಶೇಷ ರಿಯಾಯಿತಿ ದರದಲ್ಲಿ ಅಮೆರಿಕಾ ಪ್ರವಾಸ-2018

### 13 ದಿನಗಳ ಅಮೇರಿಕಾ ಪ್ರವಾಸ

**ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೆಗಾಸ್, ಲಾಸ್ ಎಂಜಲೀಸ್, ಸ್ಯಾನ್‌ಫ್ರಾನ್ಸಿಸ್‌ಕೋ**

### 10 ದಿನಗಳ ಸಿಂಗಾಪುರ-ಮಲೇಶಿಯ-ಥೈಲ್ಯಾಂಡ್ ಪ್ರವಾಸ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ, ವಿಂಗ್ಸ್ ಆಫ್ ಟೈಮ್,
ಜುರೋಂಗ್ ಬರ್ಡ್‌ಪಾರ್ಕ್, ಯುನಿವರ್ಸಲ್ ಸ್ಟುಡಿಯೋ,
ಮಲೇಶಿಯ : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್
ಥೈಲ್ಯಾಂಡ್ - ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್

### 6 ದಿನಗಳ ಶ್ರೀಲಂಕಾ ಪ್ರವಾಸ

**ರಾಮಾಯಣ ಕಾಲದ ಸ್ಥಳ ವೀಕ್ಷಣೆ**

ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ, ಹನುಮಾನ್ ದೇವಸ್ಥಾನ ಹಾಗೂ
ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು

### 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.-ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್

### 8 ದಿನಗಳ ಶ್ರೀ ಮುಕ್ತಿನಾಥ ಯಾತ್ರೆ (ಸಾಲಿಗ್ರಾಮಂ) ಬೆಂಗಳೂರಿನಿಂದ ವಿಮಾನದಲ್ಲಿ

ಪ್ರವಾಸ ಸ್ಥಳಗಳು : ಶ್ರೀ ಮುಕ್ತಿನಾಥ ದೇವಸ್ಥಾನ, ಪಶುಪತಿನಾಥ ದೇವಸ್ಥಾನ, ಜಲನಾರಾಯಣ ದೇವಸ್ಥಾನ, ಶ್ರೀ ಕೃಷ್ಣ ದೇವಸ್ಥಾನ, ಕಠ್ಮಂಡು ಸಿಟಿ ಟೂರ್,
ಪೋಕ್ರಾ-ಬಿಂದಾಬಾಸಿನಿ ದೇವಸ್ಥಾನ, ತಾಲಭೈರವಿ ದೇವಸ್ಥಾನ, ದೋಣಿಯಲ್ಲಿ ಪೋಕ್ರಾ ಲೇಕ್ ಒಂದು ವಿಹಾರ, ಮನೋಕಾಮನ ದೇವಸ್ಥಾನ (ಕೇಬಲ್ ಕಾರ್‌ನಲ್ಲಿ)

### 3 ದಿನಗಳ ಅಹೋಬಿಲಂ ನವನಾರಸಿಂಹ ಪ್ರವಾಸ

ಪ್ರವಾಸ ಸ್ಥಳಗಳು: ಜ್ವಾಲಾನರಸಿಂಹ, ಪಾವನನರಸಿಂಹ, ವರಹಾನರಸಿಂಹ, ಕಾರಂಜಿನರಸಿಂಹ, ಮಾಲೋಲನರಸಿಂಹ, ಯೋಗನರಸಿಂಹ,
ಭಾರ್ಗವನರಸಿಂಹ, ಉಗ್ರನರಸಿಂಹ, ಛತ್ರವಟನರಸಿಂಹ ಹಾಗೂ ಲಕ್ಷ್ಮೀನರಸಿಂಹ

**ಕೈಲಾಸ ಮಾನಸ ಸರೋವರ ಯಾತ್ರೆ - ವಿವರಗಳಿಗೆ ಸಂಪರ್ಕಿಸಿ - 9900080793**


ಪ್ರಧಾನ ಕಛೇರಿ : ಬಸವನಗುಡಿ
ಫೋನ್: 080-26670646, 26621983
ಮೊಬೈಲ್ : 9900080794, 9900080796

ಶಾಖಾ ಕಛೇರಿ : ಮಲ್ಲೇಶ್ವರಂ
ಫೋನ್: 080-23445559
ಮೊಬೈಲ್ : 9900080793, 9900080792

**www.orchidtours.net**

